# ಮೋರಿಗೆರೆ

## (ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ)

(ಕನ್ನಡ ವಿಶ್ವವಿದ್ಯಾಲಯ ಹಂಪಿ, ಶಾಸನಶಾಸ್ತ್ರವಿಭಾಗಕ್ಕೆ ಎಂ.ಫೀಲ್. ಪದವಿಗಾಗಿ ಅರ್ಪಿಸಿದ ನಿಬಂಧ.)

ಸಂಶೋಧಕ
ಎಸ್.ಎಂ.ಸುಬ್ಬಯ್ಯ

ಮಾರ್ಗದರ್ಶಕರು
ಡಾ. ಎಂ. ಕೊಟ್ರೇಶ್.
ಮುಖ್ಯಸ್ಥರು, ಸಹಾಯಕ ಪ್ರಾಧ್ಯಾಪಕರು
ಶಾಸನಶಾಸ್ತ್ರ ವಿಭಾಗ



ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸೆಪ್ಟಂಬರ್, ೨೦೧೦.

# ಮೋರಿಗೆರೆ

## (ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ)

(ಕನ್ನಡ ವಿಶ್ವವಿದ್ಯಾಲಯ ಹಂಪಿ, ಶಾಸನಶಾಸ್ತ್ರವಿಭಾಗಕ್ಕೆ ಎಂ.ಫೀಲ್. ಪದವಿಗಾಗಿ ಅರ್ಪಿಸಿದ ನಿಬಂಧ.)

ಸಂಶೋಧಕ
ಎಸ್.ಎಂ.ಸುಬ್ಬಯ್ಯ

ಮಾರ್ಗದರ್ಶಕರು
ಡಾ. ಎಂ. ಕೊಟ್ರೇಶ್.
ಮುಖ್ಯಸ್ಥರು, ಸಹಾಯಕ ಪ್ರಾಧ್ಯಾಪಕರು
ಶಾಸನಶಾಸ್ತ್ರ ವಿಭಾಗ





ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸೆಪ್ಟಂಬರ್, ೨೦೧೦.

814A

## ಪ್ರಮಾಣ ಪತ್ರ

ಮೋರಿಗೆರೆ: ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಡಾ.ಎಂಕೊಟ್ರೇಶ್. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

S M Subbaiah

ಎಸ್.ಎಂ. ಸುಬ್ಬಯ್ಯ
ಸಂಶೋಧಕ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ.

ಸ್ಥಳ: ವಿದ್ಯಾರಣ್ಯ

ದಿನಾಂಕ: 15-09-10

## ಮಾರ್ಗದರ್ಶಕರ ಪ್ರಮಾಣಪತ್ರ

ಮೋರಿಗೆರೆ: ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಎಸ್.ಎಂ. ಸುಬ್ಬಯ್ಯ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ:

ಡಾ.ಎಂ.ಕೊಟ್ರೇಶ್
ಮುಖ್ಯಸ್ಥರು, ಸಹಾಯಕ
ಪ್ರಾಧ್ಯಾಪಕರು.
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಪರಿವಿಡಿ

# ಅಧ್ಯಾಯ : ೧ ಪ್ರಸ್ತಾವನೆ

ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆಯು ಒಂದು ಗಂಡು ಮೆಟ್ಟಿನ ನಾಡು ಎಂಬ ಖ್ಯಾತಿಯನ್ನು ಪಡೆದು ಕೊಂಡು ಬಂದಿರುವ ಈ ಜಿಲ್ಲೆ ಇಂದು ಗುಲ್ಬರ್ಗಾ ವಿಭಾಗಕ್ಕೆ ಸೇರಿದೆ, ಕರ್ನಾಟಕದ ಮಧ್ಯ ಭಾಗದಲ್ಲಿರುವ ಜಿಲ್ಲೆ.

ಹಡಗಲಿ, ಕೂಡ್ಲಿಗಿ, ಹೊಸಪೇಟೆ, ಮಲ್ಲಾಪುರ ಸಬ್ ತಾಲೂಕಿನ ಕೆಲವು ಗ್ರಾಮಗಳನ್ನು ಸೇರಿಸಿ ಹಗರಿಬೊಮ್ಮನಹಳ್ಳಿ ತಾಲೂಕನ್ನು ರಚಿಸಲಾಯಿತು. ಶಾಸಕರಾಗಿದ್ದ ಸಿ.ಅಂದಾನಪ್ಪ ಈ ತಾಲೂಕಿನ ನಿರ್ಮಾಣಕ್ಕೆ ಶ್ರಮಿಸಿದ್ದರು. ಹಗರಿಬೊಮ್ಮನಹಳ್ಳಿ ತಾಲೂಕಿನ ವಿಸ್ತೀರ್ಣ–೯೪೭ಚ.ಕಿ.ಮೀ ಇದೆ, ಈ ತಾಲೂಕಿನಲ್ಲಿ ೧೨೦ ಜನವಸತಿ ಇರುವ ಹಳ್ಳಿಗಳು, ೪ ಜನವಸತಿ ರಹಿತ ಹಳ್ಳಿಗಳಿವೆ.

ಈ ತಾಲೂಕಿನಲ್ಲಿ ಕೋಗಳಿ, ತಂಬ್ರಹಳ್ಳಿ ಹಂಪಸಾಗರ ಎಂಬ ನಾಲ್ಕು ಹೋಬಳಿಗಳಿವೆ, ೪ ಜಿಲ್ಲಾ ಪಂಚಾಯತ್ ಕ್ಷೇತ್ರಗಳಿವೆ, ೧೬ ತಾಲೂಕು ಪಂಚಾಯಿತಿ ಕ್ಷೇತ್ರಗಳು, ೨೨ ಗ್ರಾಮಪಂಚಾಯಿತಿಗಳಿವೆ. ಈ ತಾಲೂಕಿನಲ್ಲಿ ೪೫ ಶಾಸನಗಳು ಸಿಕ್ಕಿವೆ.

ಒಂದು ಊರು ಅಥವಾ ತಾಲೂಕಿನ ಇತಿಹಾಸವೆಂದರೆ ಕೇವಲ ಅದೊಂದಕ್ಕೆ ಸೀಮಿತವಾಗಿರಲು ಸಾಧ್ಯವಿಲ್ಲ. ತನ್ನ ಸುತ್ತಲಿನ ಊರು ಅಥವಾ ತಾಲೂಕಗಳನ್ನೊಳಗೊಂಡ ಜಿಲ್ಲೆ ಹಾಗೂ ನೆರೆ ಜಿಲ್ಲೆಗಳ ಇತಿಹಾಸಗಳೊಂದಿಗೆ ತಳಕು ಹಾಕಿಕೊಂಡಿರುತ್ತದೆ. ಇಂದಿನ ದಿನಮಾನಗಳಲ್ಲಂತೂ ಈ ಸಂಬಂಧಗಳು ರಾಷ್ಟ್ರಮಟ್ಟದಲ್ಲಿ ವ್ಯಾಪಿಸಿವೆ, ಹೀಗಾಗಿ ತಾಲೂಕಿನ ಇತಿಹಾಸವನ್ನು ಗಮನಿಸಿದಾಗ ಜಿಲ್ಲೆ, ರಾಜ್ಯ, ದೇಶಗಳ ಭೂಪಟಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಗುರುತಿಸಬೇಕಾಗುತ್ತದೆ.

ಇತಿಹಾಸ ಪೂರ್ವ ಹಾಗೂ ಇತಿಹಾಸ ಕಾಲದಿಂದಲೂ ಕೆಲವು ಸ್ಥಳಗಳೂ ಗುರುತಿಸಲ್ಪಟ್ಟಿವೆ.ಇಲ್ಲಿಯ ಪರಿಸರದಲ್ಲಿ ಪ್ರಾಗೈತಿಹಾಸಿಕ ಕುರುಹುಗಳಿರುವುದನ್ನು ಸಂಶೋಧಕರು ಗುರುತಿಸಿದ್ದಾರೆ. ಗದ್ದಿಕೇರಿ, ಹಂಪಸಾಗರ ಮತ್ತು ಕೋಗಳಿ ಸುತ್ತಮುತ್ತ ನೂತನ ಶಿಲಾಯುಗ, ಶಿಲಾ ತಾಮ್ರಯುಗ, ಬೃಹತ್ ಶಿಲಾಯುಗ ಹಾಗೂ ಇತಿಹಾಸ ಆರಂಭಯುಗಕ್ಕೆ ಸೇರಿದ ನೆಲೆಗಳನ್ನು ಗುರುತಿಸಲಾಗಿದೆ. ಇತ್ತೀಚೆಗೆ ದಶಮಾಪುರದ ಹತ್ತಿರದ ತಿಮ್ಮಪ್ಪನ ಅಡವಿಯಲ್ಲಿ ೯೧ ಕಲ್ಲು ವೃತ್ತಗಳನ್ನು ಪತ್ತೆ ಹಚ್ಚಿದ್ದಾರೆ.

ಕದಂಬರು, ಗಂಗರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರಿ ಅರಸರು, ಹೊಯ್ಸಳರು, ದೇವಗಿರಿಯಾದವರು, ವಿಜಯನಗರದ ಅರಸರು, ಮೈಸೂರು ಅರಸರು, ಬ್ರಿಟಿಷರು ಈ ಪ್ರದೇಶವನ್ನು ಆಳಿದ್ದಾರೆ. ತಾಲ್ಲೂಕಿನಲ್ಲಿ ಪ್ರಮುಖವಾಗಿ ಕಂಡುಬರುವ ಐತಿಹಾಸಿಕ ಸ್ಥಳಗಳೆಂದರೆ ಕೋಗಳಿ, ಅಂಬಳಿ, ಮೋರಿಗೇರಿ, ತಂಬ್ರಹಳ್ಳಿ, ಬನ್ನಿಕಲ್, ಮಗಿಮಾವಿನಹಳ್ಳಿ, ದಶಮಾಪುರ, ಮತ್ತು ಹಗರಿಬೊಮ್ಮನಹಳ್ಳಿ.

ಈ ಅಧ್ಯಯನದಲ್ಲಿ ಮೋರಿಗೇರಿ ಗ್ರಾಮದ ಪ್ರಾಚೀನಕಾಲದ ಶಾಸನಗಳು ಮತ್ತು ದೇವಾಲಯಗಳ ಜೊತೆಗೆ ಮೂರ್ತಿಶಿಲ್ಪವನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಈ ಗ್ರಾಮಕ್ಕೆ ಸಂಬಂಧಿಸಿದಂತೆ ಅಧ್ಯಯನಗಳು ನಡೆದಿರುವುದು ಬಹಳ ಕಡಿಮೆ. ಈ ಹಿನ್ನಲೆಯಲ್ಲಿ ವಿಸ್ತೃತವಾದ ಅಧ್ಯಯನ ಕೈಗೊಳ್ಳುವ ಉದ್ದೇಶದಿಂದ ಮೋರಿಗೇರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ ಕೈಗೊಂಡಿದಿದ್ದೇನೆ.

ಮೋರಗೇರಿಯು ಪ್ರಾಚೀನ ಕರ್ನಾಟಕದಲ್ಲಿ ಅಂದರೆ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಈ ಗ್ರಾಮವು ಅಂದಿನ ಮೋರಗೇರೆ ಪರಿಸರದಲ್ಲಿ ಬರುವ ಕೋಗಳಿ ನಾಡಿಗೆ ಸಮನಾಗಿ ಬೆಳೆದು, ಐತಿಹಾಸಿಕ ಸ್ಥಳಗಳಲ್ಲಿ ಮೋರಿಗೇರೆ ವಿಶಿಷ್ಟವಾದ ಸ್ಥಾನಮಾನ ಪಡೆದುಕೊಂಡಿದೆ.

## ೧.೧ ಅಧ್ಯಯನ ಉದ್ದೇಶ ಮತ್ತು ಅವಶ್ಯಕತೆ

ಒಂದು ಪ್ರದೇಶದ ಸಾಂಸ್ಕೃತಿಕ ಇತಿಹಾಸ ರಚನೆಗೆ ಪ್ರಾಥಾಮಿಕ ಆಕರ ಸಾಮಗ್ರಿಯಾಗಿ ಶಾಸನಗಳು ಬಹುಮುಖ್ಯ. ಅಲ್ಲಿ, ಬದುಕುವ ಸಾಮಾನ್ಯ ಜನರ ಸಾಂಸ್ಕೃತಿಕ ಇತಿಹಾಸದ ಅಧ್ಯಯನ ಮಾಡುವುದು ಮಹತ್ವ ಪೂರ್ಣವಾದುದು. ಹಿರಿಯ ಕಾಲದ ತಲೆಮಾರಿನ ಅಧ್ಯಯನಕಾರರು ಇತಿಹಾಸವನ್ನು ಒಂದು ಪ್ರದೇಶವನ್ನಾಳಿದ ರಾಜ ಅವನ ಪರಿವಾರ, ಸಾಧನೆಗಳನ್ನು ಮಾತ್ರ ಬಿಂಬಿಸಿದ್ದಾರೆ. ಆದರೆ ಇಂದಿನ ಅಧ್ಯಯನವು ಅಲ್ಲಿ ವಾಸಿಸುವ ಜನರ ಬದುಕಿನ ಇತಿಹಾಸದ ಜೊತೆಗೆ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವ ಕಡೆಗೆ ಅಧ್ಯಯನವವನ್ನು ವಿಸ್ತಾರಗೊಳಿಸಬೇಕಾಗಿರುವುದು ಅವಶ್ಯಕವಾಗಿದೆ.

ಪ್ರಸ್ತುತ ಸಂಧರ್ಭದಲ್ಲಿ ಅಧ್ಯನದ ನೆಲೆಗಳು ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ ವಿಸ್ತಾರಗೊಳ್ಳುತ್ತಿವೆ. ಈ ರೀತಿಯ ನೆಲೆಗಳಿಂದ ಒಂದು ಪ್ರದೇಶ, ಒಂದು ಸ್ಥಳದ ಸಾಂಸ್ಕೃತಿಕ ಮಹತ್ವವನ್ನು ವಿಸ್ತಾರಗೊಳಿಸುವುದರ ಜೊತೆಗೆ ಆ ಸ್ಥಳದ ಅನನ್ಯತೆಯನ್ನು ಗುರುತಿಸುವಲ್ಲಿ ಸ್ಥಳೀಯ ಚರಿತ್ರೆಯ ಅಧ್ಯಯನ ಬಹಳ ಮಹತ್ವವಾದದ್ದು.

ಈ ಅಧ್ಯಯನ ಸಂಪ್ರಂಧದ ಶೀರ್ಷಿಕೆ 'ಮೋರಗೆರೆ: ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ' ಇದಕ್ಕೆ ಸಂಬಂಧಿಸಿದಂತೆ ಕೃತಿಗಳಿಂದ ವಿಷಯ ಸಂಗ್ರಹಿಸಿ ಪಟ್ಟಿಕೆ ವಿಧಾನ ಅನುಸರಿಸಲಾಯಿತು. ದೇವಾಲಯದ ವಾಸ್ತುಶಿಲ್ಪಕ್ಕೆ ಸಂಬಂಧಪಟ್ಟಂತೆ, ಜೈನ, ಶೈವ, ವೈಷ್ಣವ ಎಂದು ವಿಭಾಗಿಸಲಾಯಿತು, ದೇವಾಲಯಗಳ ಕುರಿತು ಪ್ರಕಟಿತ ಮಾಹಿತಿ ದೊರೆತರು ಅವುಗಳ ಜೊತೆಗೆ ಶಾಸನಗಳು, ಮೂರ್ತಿ ಶಿಲ್ಪಕ್ಕೆ ಪೂರಕವಾಗಿ ಮಾಹಿತಿಯ ಜೊತೆಗೆ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದಲ್ಲಿ ವಾಸ್ತುಶಿಲ್ಪ ಅಧ್ಯಯನಕ್ಕಾಗಿ ಛಾಯ ಚಿತ್ರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಒಟ್ಟಾರೆಯಾಗಿ ಈ ಅಧ್ಯಯನದಲ್ಲಿ ಪಟ್ಟಿಕಾ ವಿಧಾನ, ನಕಾಶೆ, ಛಾಯ ಚಿತ್ರಗಳ ಬಳಕೆಯನ್ನು ಅಳವಡಿಸಲಾಗೆದೆ. ಸಂಶೋಧನಾ ಕಾರ್ಯಕ್ಕೆ ಸಂಬಂಧಪಟ್ಟಂತೆ, ಇದು ಮೊದಲ ಪ್ರಯತ್ನವಾಗಿದೆ.

ಈ ಅಧ್ಯಯನದಲ್ಲಿ ಮೋರಿಗೆರೆ ಗ್ರಾಮದ ಪ್ರಾಚೀನ ಕಾಲದ ಶಾಸನಗಳು ಮತ್ತು ದೇವಾಲಯಗಳ ಜೊತೆಗೆ ಮೂರ್ತಿ ಶಿಲ್ಪವನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಆದರೆ ಅವುಗಳ ಪ್ರಮಾಣ ಕಡಿಮೆಯಿದ್ದು, ಇವು ರಾಷ್ಟ್ರಕೂಟರು, ಹೊಯ್ಸಳರು, ಕಲ್ಯಾಣ ಚಾಲುಕ್ಯರ ಕಾಲಕ್ಕೆಸಂಬಂಧಿಸಿದ್ದಾಗಿವೆ. ಅತಿ ಹೆಚ್ಚಾಗಿ ಕಲ್ಯಾಣಿ ಚಾಲುಕ್ಯರ ಕಾಲದ ಶಾಸನಗಳು, ದೇವಾಲಯಗಳು, ಮೂರ್ತಿ ಶಿಲ್ಪಗಳು ದೊರೆಯುತ್ತವೆ. ಈ ಗ್ರಾಮದಲ್ಲಿನ ಹೆಚ್ಚಿನ ಶಾಸನಗಳು ದೇವಾಲಯಗಳಿಗೆ ದಾನ ನೀಡಿದ ವಿಷಯಗಳನ್ನು ಕುರಿತು ತಿಳಿಸುತ್ತವೆ. ತ್ಯಾಗ ಮತ್ತು ವೀರತ್ವಕ್ಕೆ ಪೂರಕವಾದ ಕೆಲವು ವೀರಗಲ್ಲು, ಮೂರ್ತಿ ಶಿಲ್ಪಗಳು ದೊರೆಯುತ್ತವೆ.

ಮೋರಗೆರೆ ಗ್ರಾಮವು ಬಳ್ಳಾರಿಯಿಂದ ೭೫ ಕೀ.ಮೀ. ದೂರದಲ್ಲಿದ್ದು, ಪೂರ್ವಕ್ಕೆ ಹಗರಿಬೊಮ್ಮನಹಳ್ಳಿ, ಪಶ್ಚಿಮಕ್ಕೆ, ಹೂವಿನ ಹಡಗಲಿ, ಉತ್ತರಕ್ಕೆ ಹೊಸಪೇಟೆ, ದಕ್ಷಿಣಕ್ಕೆ

ಹರಪನಹಳ್ಳಿ ತಾಲೂಕುಗಳಿಂದ ಕೂಡಿದೆ. ಈ ಗ್ರಾಮವು ಐತಿಹಾಸಿಕವಾಗಿ ಮಹತ್ವ ಪಡೆದಿದ್ದು, "ಮೀರಿಂಗೇರಿಯು" ಪ್ರದೇಶವು ಸಾಂಸ್ಕೃತಿಕ ಮಹತ್ವವನ್ನು ಪಡೆದಿದೆ.

ಪ್ರಸ್ತುತ ಸ್ಥಿತಿಯಲ್ಲಿ ಜಾಗತೀಕರಣದಿಂದಾಗುವ ಬದಲಾವಣೆಗಳಿಂದಾಗಿ ಐತಿಹಾಸಿಕ ಕುರುಹುಗಳಾದ ಶಾಸನಗಳು, ದೇವಾಲಯಗಳು, ಸ್ಮಾರಕ ಶಾಸನಗಳು, ಮೂರ್ತಿಶಿಲ್ಪಗಳು ನಾಶವಾಗುತ್ತಿವೆ. ಅವುಗಳು ಗ್ರಾಮಸ್ಥರ ಹಾಗೂ ಕಾಳಜಿ ಇಲ್ಲದೆ ಮನಸ್ಸುಗಳಿಂದ ಕಣ್ಮರೆಯಾಗುತ್ತಿವೆ. ಇಲ್ಲಿ ಶಾಸನಗಳು ದೇವಾಲಯಗಳು ಕಡಿಮೆ ಇದ್ದರೂ ಸಹಾ ಸಂಶೋಧಕರನ್ನು, ವಿದ್ವಾಂಸರನ್ನು ಅಧ್ಯಯನಕ್ಕೆ ಕೈಬೀಸಿ ಕರೆಯುತ್ತವೆ.

ಈ ಗ್ರಾಮಕ್ಕೆ ಸಂಬಂಧಿಸಿದಂತೆ ಅಧ್ಯಯನಗಳು ನಡೆದಿರುವುದು ಬಹಳ ಕಡಿಮೆ, ಈ ಹಿನ್ನಲೆಯಲ್ಲಿ ಸಂಶೋಧನೆಗಳು, ಅಧ್ಯಯನಗಳು ನಡೆದು ಇಲ್ಲಿರುವ ಕೊರತೆ ತುಂಬುವ ನೆಲೆಯಲ್ಲಿ ಅಧ್ಯಯನಗಳನ್ನು ಕೈಗೊಳ್ಳುವ ಅನಿವಾರ್ಯತೆ ಇದೆ. ಈ ಅಧ್ಯಯನದಲ್ಲಿ ಬರುವ ದೇವಾಲಯಗಳನ್ನು ತಿಳಿಯಲು, ಸಂಬಂಧಿಸಿದ ಅಧ್ಯಯನಗಳನ್ನು ಸಹ ಗಮನಿಸಲಾಗಿದೆ. ಇದಕ್ಕೆ ಪೂರಕವಾಗಿ ಇಲ್ಲಿಯವರೆಗೆ ಚರ್ಚಿಸಿದ ಅಂಶಗಳನ್ನು ಮನಗಂಡು ಮೋರಗೆರೆಬಗ್ಗೆ ನಡೆದಿರುವ ಅಧ್ಯಯನಗಳಲ್ಲಿ ಕೆಲವುಗಳಲ್ಲಿ ಕೆಲವು ಮಾತ್ರ ಉಲ್ಲೇಖಗೊಂಡಿವೆ. ಆದ್ದರಿಂದ ವಿಸ್ತೃತವಾದ ಅಧ್ಯಯನ ಕೈಗೊಳ್ಳುವ ಉದ್ದೇಶದಿಂದ 'ಮೋರಿಗೆರೆ: ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ' ಎನ್ನುವ ಅಧ್ಯಯನವನ್ನು ಕೈಗೊಂಡಿದ್ದೇನೆ. ಮೋರಿಗೆರೆಯ ಶಾಸನಗಳು ಮತ್ತು ದೇವಾಲಯಗಳ ಹಿನ್ನಲೆಯಲ್ಲಿ ಸಾಂಸ್ಕೃತಿಕವಾಗಿ, ವಿವರವಾಗಿ ಅಧ್ಯಯನವನ್ನು ಮಾಡಲಾಗೆದೆ. ಈ ಗ್ರಾಮದಲ್ಲಿಯ ೪ ಶಾಸನಗಳು, ಹಾಗೂ ೧೫ ದೇವಾಲಯುಗಳ ಜೊತೆಗೆ ಈ ಮೂರ್ತಿ ಶಿಲ್ಪಗಳನ್ನಿಟ್ಟುಕೊಂಡು, ದೇವಾಲಯಗಳ ವಾಸ್ತು ಶಿಲ್ಪದ ಮಾದರಿ, ಲಕ್ಷಣ, ಶೈಲಿಗಳನ್ನು ಚರ್ಚಿಸಲಾಗಿದೆ, ಶಾಸನಗಳಲ್ಲಿ ಅಡಕವಾಗಿರುವ ವಿಷಯಗಳನ್ನು, ವೈ ವಿದ್ಯತೆಯನ್ನು ಕುರಿತು ಚರ್ಚಿಸಲಾಗಿದೆ, ಮೂರ್ತಿ ಶಿಲ್ಪಗಳ ಶೈಲಿ, ಧರ್ಮ, ಕಾಲ ಮುಂತಾದ ಲಕ್ಷಣಗಳನ್ನು ಗುರುತಿಸಲು, ಸ್ಮಾರಕ ಶಾಸನಗಳನ್ನು ಅಧ್ಯಾಯನ ಮಾಡಲಾಗಿದೆ.

ಡಾ॥ ದೇವರಕೊಂಡಾರೆಡ್ಡಿ ಮತ್ತು ಇತರರ ಸಂಪಾಧನೆಯ ' ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂಪುಟ-೧'ರಲ್ಲಿ ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲೂಕಿನ ಮೋರಿಗೆರೆ ಪರಿಸರಕ್ಕೆ ಸಂಬಂಧಿಸಿದ ಶಾಸಗಳನ್ನಿಟ್ಟುಕೊಂಡು ದಾನ ಶಾಸನಗಳ, ರಾಜಕೀಯ ಚರಿತ್ರೆ, ಮೋರಗೆರೆ ಪರಿಸರದಲ್ಲಿನ ದೇವಾಲಯಗಳ ಪ್ರಾಚೀನತೆಯನ್ನು ಕಟ್ಟಕೊಡಲು ಪ್ರಯತ್ನಿಸಲಾಗಿದೆ. 'ಕರ್ನಾಟಕ ದೇವಾಲಯಗಳ ಕೋಶ'(ಬಳ್ಳಾರಿ ಜಿಲ್ಲೆ) ಎನ್ನುವ ಕೃತಿಯು ಮೋರಿಗೆರೆ ದೇವಾಲಯಗಳ ವಾಸ್ತು ಶಿಲ್ಪದ ಲಕ್ಷಣಗಳು ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡುತ್ತದೆ. ಡಾ.ಸಿ.ಎಸ್.ಪಾಟೀಲ್ ರವರ 'ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ ದೇವಾಲಯಗಳು' ಎನ್ನುವ ಕೃತಿ ಬಹುಮುಖ್ಯವಾಗಿ ನನ್ನ ಅಧ್ಯಯನಕ್ಕೆ

ಪೂರಕವಾಗಿ ದೇವಾಲಯದ ವಾಸ್ತು ಶಿಲ್ಪದ ಲಕ್ಷಣಗಳನ್ನು ಸಮಗ್ರವಾಗಿ ತಿಳಿಯಲು ಸಹಾಯಕವಾಗಿದೆ.

ಡಾ॥ ಜೆ.ಎಂ. ನಾಗಯ್ಯ ನವರ 'ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ' ಎನ್ನುವ ಕೃತಿಯಲ್ಲಿ ಬಳ್ಳಾರಿ ಜಿಲ್ಲೆಯ ಶಾಸನಗಳ ಜೊತೆಗೆ ಮೋರಿಗೆರೆಯ ಶಾಸನ ಬಳಕೆಯನ್ನು ಮಾಡಿಕೊಂಡು ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸವನ್ನು ಕುರಿತು ಚರ್ಚಿಸುವುದರಿಂದ ನನ್ನ ಅಧ್ಯಯನಕ್ಕೆ ಪೂರಕ ಅಂಶವನ್ನು ತಿಳಿಸಲಾಗಿದೆ.

ಪ್ರಮುಖವಾಗಿ ನನ್ನ ಅಧ್ಯಯನದ ನಿಂಬಂಧದಲ್ಲಿ ೫ ಅಧ್ಯಯಗಳನ್ನು ಮಾಡಿಕೊಂಡು 'ಮೋರಿಗೆರೆ' ಐತಿಹಾಸಿಕ ಹಾಗು ಸಾಂಸ್ಕೃತಿಕ ಅಧ್ಯಯನವನ್ನು' ಮಾಡುವ ದೃಷ್ಠಿಯಲ್ಲಿ ಇದು ಮೊದಲ ಪ್ರಯತ್ನವಾಗಿದೆ. ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ಮತ್ತು ವ್ಯಾಪ್ತಿಯನ್ನು ತಿಳಿಸಲಾಗಿದ್ದು, ಈ ಅಧ್ಯಯನಕ್ಕೆ ಪೂರಕವಾದ ಪ್ರಾಥಾಮಿಕ ಆಕರಗಳನ್ನಿಟ್ಟುಕೊಂಡು ಅವುಗಳ ಹಿನ್ನಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಗ್ರಾಮದ ಅಧ್ಯಯನಕ್ಕೆ ಹೆಚ್ಚು ಮಾನ್ಯತೆಕೊಡಬೇಕೆನ್ನುವ ಹಂಬಲದಿಂದ ಅಧ್ಯಯನದ ಅವಶ್ಯಕತೆಯನ್ನು ಮುಖ್ಯವಾಗಿ ಪ್ರತಿಬಿಂಬಿಸಿದೆ.

ಎರಡನೆಯ ಅಧ್ಯಾಯದಲ್ಲಿ ಮೋರಿಗೆರೆಯ ಇತಿಹಾಸದ ಬಗ್ಗೆ ಹೇಳಲಾಗಿದ್ದು, ಮೋರಿಗೆರೆಯ ಭೌಗೋಳಿಕ ಪರಿಸರದ ಬಗ್ಗೆ, ಹಾಗೂ ಮೋರಿಗೆರೆಯ ಸ್ಥಳ ಪರಿಚಯವನ್ನು ಚರ್ಚಿಸಲಾಗಿದ್ದು, ಜೊತೆಗೆ ಗ್ರಾಮ ಅಥವಾ ಮೋರಿಗೆರೆ ಎಂಬ ಪದ ಯಾವ ರೀತಿ ಉದಯವಾಯಿತು ಎನ್ನುವ ಅಂಶಗಳನ್ನು ಇಲ್ಲಿ ಕಾಣಬಹುದು.

ಮೂರನೇ ಅಧ್ಯಯನದಲ್ಲಿ ಮೋರಿಗೆರೆಯ ಚಾರಿತ್ರಿಕ ನೋಟದಲ್ಲಿ ರಾಜಕೀಯ ಚರಿತ್ರೆ ಅಥವಾ ಆಳಿದ ಅರಸರುಗಳ ಬಗ್ಗೆ ಕುರಿತು ಪ್ರಸ್ತಾಪಿಸಲಾಗಿದೆ. ಇಲ್ಲಿ ಪ್ರಮುಖವಾಗಿ ಐತಿಹಾಸಿಕ ದೃಷ್ಠಿಯಿಂದ ನೋಡಿದಾಗ ಕಾಲದಿಂದ ಕಾಲಕ್ಕೆ ಅರಸು ಮನೆತನಗಳು ಆಳ್ವಿಕೆ ನಡೆಸುತ್ತಿದ್ದು. ಅವರು ಬಿಟ್ಟು ಹೋದ ಚರಿತ್ರೆಯನ್ನು ಕಟ್ಟಲು ಮುಖ್ಯ ಆಕರಗಳಾಗಿವೆ. ಅವುಗಳಲ್ಲಿ ಶಾಸನಗಳು, ದೇವಾಲಯಗಳು, ಮೂರ್ತಿ ಶಿಲ್ಪಗಳು, ಸ್ಮಾರಕ ಶಾಸನಗಳು, ಅಧ್ಯಯನಕ್ಕೆ ಪೂರಕವಾಗಿವೆ. ಈ ಅಧ್ಯಾಯದಲ್ಲಿ ದೇವಾಲಯಗಳಿಗೆ ನೀಡಿದ ದಾನ ಶಾಸನಗಳನ್ನು ಚರ್ಚಿಸಿದ್ದು, ಅವುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಾಮಾಜಿಕ ಕಾರ್ಯಗಳಿಗೆ, ಮಠ ಮಾನ್ಯಗಳಿಗೆ, ವ್ಯಕ್ತಿಗಳಿಗೆ, ಜಾತ್ರೆಗೆ ಬಂದ ಜನ-ಸಾಮಾನ್ಯರಿಗೆ ಹಾಗೂ ತೆರಿಗೆಯ ದಾನ, ಹೀಗೆ ದಾನದ ವಿವಿಧ ಮಗ್ಗಲುಗಳನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಈ ಅಧ್ಯಯನದಲ್ಲಿ ಸ್ಮಾರಕ ಶಾಸನಗಳು, ಶಾಸನ ಸಾಹಿತ್ಯ, ಶಾಸನ ಶಿಲ್ಪವನ್ನು ಕುರಿತು. ಚರ್ಚಿಸಲಾಗಿದೆ, ಶಾಸನ ಶಿಲ್ಪವನ್ನು ಕುರಿತು ಅಧ್ಯಯನ ಮಾಡಿದಾಗ ಅದರಲ್ಲಿಯ ಭಿನ್ನತೆಯನ್ನು ಹಾಗೂ ಪ್ರಾದೇಶಿಕವಾಗಿ ಅಲ್ಲಿ ಪ್ರಬಲವಾಗಿರುವ ಧರ್ಮದ ಬಗ್ಗೆ ತಿಳಿಯಲು ಪ್ರಯತ್ನಿಸಲಾಗಿದೆ. ದೇವಾಲಯದ ವಾಸ್ತುಶಿಲ್ಪ ಮತ್ತು

## ೧.೨ ಅಧ್ಯಯನದ ವಿಧಿ – ವಿಧಾನಗಳು

ಮೋರಗೇರಿಯ ಶಾಸನಗಳು ಮತ್ತು ಸ್ಮಾರಕಗಳು ಒದಗಿಸುವ ಮಾಹಿತಿಯನ್ನು ಅಧ್ಯಯನ ಮಾಡಿ ಆಯಾ ವಿಷಯುಗಳಿಗೆ ಸಂಬಂಧಿಸಿದಂತೆ ಪಟ್ಟಿಕೆಗಳನ್ನು ತಯಾರಿಸಿಕೊಳ್ಳಲಾಯಿತು. ಶಾಸನ ಸ್ವರೂಪ, ಕಾಲ , ಸ್ಥಳ. ಅರಸರ ಮಾಹಿತಿಯೊಂದಿಗೆ , ಅವು ಒಳಗೊಂಡ ವಿಷಯಗಳನ್ನು (ರಾಜಕೀಯ, ಸಾಮಾಜಿಕ, ಆರ್ಥಿಕ , ಧಾರ್ಮಿಕ ವಿಷಯಗಳನ್ನು) ಪ್ರತ್ಯೇಕವಾದ ಪಟ್ಟಿಕೆಗಳಲ್ಲಿ ದಾಖಲಿಸಿಕೊಳ್ಳಲಾಯಿತು. ಕ್ಷೇತ್ರಕಾರ್ಯದ ಮೂಲಕ ಕಂಡುಕೊಂಡು ಶಾಸನಗಳು ದೇವಾಲಯಗಳ ಅಧ್ಯಯನ ದೊಂದಿಗೆ ಅವುಗಳ ಭಾವಚಿತ್ರಗಳ ಸಹಾಯದಿಂದ ವಿಷಯಗಳನ್ನು ಪಟ್ಟಿಕೆಗಳಲ್ಲಿ ದಾಖಲಿಸಿ ಕೊಳ್ಳಲಾಯಿತು.

ಹೀಗೆ ಶಾಸನಗಳು ಮತ್ತು ಸ್ಮಾರಕಗಳ ಅಧ್ಯಯನದಿಂದ ಪಟ್ಟಿಕೆಗಳಲ್ಲಿ ಸಂಗ್ರಹಿಸಿದ ವಿಷಯ ಗಳನ್ನೆಲ್ಲ ಆಯಾ ವಿಭಾಗಕ್ಕನುಸಾರವಾಗಿ ಕಾಲಕ್ರಮದಲ್ಲಿ ಹೊಂದಿಸಿ ಕೊಳ್ಳಲಾಯಿತು. ಅವುಗಳಿಂದ ಈ ನಾಡನ್ನಾಳಿದ ಅರಸರ ಬಗ್ಗೆ ಮತ್ತು ಅಂದಿನ ಜನ ಸಾಮಾನ್ಯರ ಬದುಕನ್ನು ತಿಳಿಯಲು ಹಾಗೂ ಅವರೆಲ್ಲರ ಸಾಂಸ್ಕೃತಿಕ ನೆಲೆಗಳನ್ನರಿಯಲು ಸಾಧ್ಯವಾಯಿತು.

ಈ ಮಾದರಿಯಲ್ಲಿ ಬಂದ ಸಂಶೋಧನ ಪ್ರಬಂಧ ಹಾಗೂ ಇತರ ಗ್ರಂಥಗಳಿಂದ ಸಂಗ್ರಹಿಸಲಾದ ಪೂರಕ ಮಾಹಿತಿಯನ್ನು ಸಂಧರ್ಭಕ್ಕನು ಸಾರವಾಗಿ ಸೇರಿಸಿಕೊಳ್ಳಲಾಗಿದೆ. ಹೀಗೆ ಮೂಲ ಆಕರಗಳಿಗೆ ಪೂರಕ ಸಾಮಾಗ್ರಿಯನ್ನು ಸೇರಿಸಿ ಈ ಪ್ರಭಂಧವನ್ನು ರಚಿಸಲಾಗಿದೆ.

# ಅಧ್ಯಾಯ : ೨ ಐತಿಹಾಸಿಕ ಹಿನ್ನಲೆ

## ೨.೧ ಭೌಗೋಳಿಕ ಪರಿಸರ

ಪುರಾತನ ಕಾಲದಿಂದಲೂ ಮೋರಗೇರಿಯು ಸಾಂಸ್ಕೃತಿಕವಾಗಿ ತನ್ನದೇ ಆದ ವಿಶೇಷತೆಯನ್ನು ಗುರುತಿಸಿಕೊಂಡಿದೆ. ಈ ಗ್ರಾಮವು ಹಗರಿಬೊಮ್ಮನಹಳ್ಳಿಯಿಂದ ಸುಮಾರು ೧೨ ಕಿ.ಮೀ ದೂರದಲ್ಲಿದೆ ಕ್ರಿ.ಶ.೧೦೪೫ ರ ಅಕ್ಟೋಬರ್ ೨೮ರ ಶಾಸನ[1] "ಮೀರಿಂಗೆರೆ" ಎಂಬ ಹೆಸರನ್ನು ಉಲ್ಲೇಖಿಸುತ್ತದೆ. ಈ ಶಾಸನವು ಮೀರಿಂಗೇರಿ ಲಾಕುಳೇಶ ಪಾಶುಪತದ ಕೇಂದ್ರವಾಗಿದ್ದುದನ್ನು ತಿಳಸುತ್ತದೆ. ಈ ಗ್ರಾಮದಲ್ಲಿ ಸಂಗೀತ ,ಸಾಹಿತ್ಯ ಬೆಳೆದು ಬಂದಿರುವುದನ್ನು ಗುರುತಿಸಬಹುದು.

ಈ ಗ್ರಾಮದ ಸುತ್ತ ಮುತ್ತಲಿನ ಪ್ರದೇಶದಲ್ಲಿ ಒಣ ಭೂಮಿ ಇದೆ ಮೋರಗೇರಿ ಗ್ರಾಮದ ಭೂ ಪ್ರದೇಶವು ಬಯಲು ಪ್ರದೇಶ ಹೊಂದಿದೆ ಇಲ್ಲಿ ಯಾವುದೇ ರೀತಿಯ ಗುಡ್ಡ ಪ್ರದೇಶಗಳು ಕಂಡು ಬರುವುದಿಲ್ಲ, ಪ್ರಾಚೀನ ಕಾಲದಲ್ಲಿ ಈ ಗ್ರಾಮವು ಕೋಗಳಿ, ಸೊನ್ನ, ಹೊಳಗುಂದಿ, ಇಟ್ಟಿಗೆ, ಮುಂತಾದ ಪ್ರದೇಶಗಳ ಜೊತೆ ಸಂಪರ್ಕವನ್ನು ಹೊಂದಿತ್ತು.

ಪ್ರಾಚೀನ ಕರ್ನಾಟಕದಲ್ಲಿ ನಿಷ್ಠೆಯಿಂದ ಇದ್ದಂಥ ಸೈನಿಕರಿರುತ್ತಿದ್ದರು ಚಾಲುಕ್ಯ, ಹೊಯ್ಸಳ ಮತ್ತು ವಿಜಯ ನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಈ ಗ್ರಾಮದಲ್ಲಿ ಲೆಂಕಸಾಸಿರ್ವರು ಎಂಬ ಸೈನಿಕರಿದ್ದರು ಅವರೂ ಜೋಳವಾಳಿಯವರಂತೆ ಅರಸನಿಂದ ಅನ್ನ ಹಾಕಿಸಿಕೊಂಡವರಾಗಿದ್ದು ಯುದ್ದದಂಥ ಪ್ರಸಂಗಗಳಲ್ಲಿ ತನ್ನ ಅರಸನ ಪರವಾಗಿ ತಮ್ಮನ್ನೇ ಅರ್ಪಿಸಿಕೊಂಡು ಹೋರಾಡುತ್ತಿದ್ದಂಥ ವೀರರಾಗಿದ್ದಾರೆ. 'ಲೆಂಕ' ಎಂದರೆ ಯುವ ಸೈನಿಕವೆಂಬ ಅರ್ಥವಿದೆ. ಈ ಲೆಂಕರು ತಮ್ಮ ತಮ್ಮ ಗ್ರಾಮಗಳಲ್ಲಿಯೆ ಇರುತ್ತಿದ್ದು ಅರಸನಿಗೆ ಶತ್ರುಗಳಿಂದ ಆಪತ್ತು ಒದಗಿದಾಗ ಅದರ ನಿವಾರಣೆಗಾಗಿ ನಿಷ್ಠೆಯಿಂದ ಹೋರಾಡುತ್ತಿದ್ದ ವೀರಾಧಿವೀರರಾಗಿದ್ದಾರೆ ಇಂಥ ಲೆಂಕ ಸಾಸಿರ್ವರು (ಸಾವಿರ ಲೆಂಕರು) ಬಳ್ಳಾರಿ ಜಿಲ್ಲೆಯಲ್ಲಿದ್ದು ತಮ್ಮ ಅರಸನಿಗೆ ನೆರವಾಗುತ್ತಿದ್ದುದಷ್ಟೇ ಅಲ್ಲ ಸಮಾಜ ಸೇವೆಯನ್ನು ಅವರು ಮಾಡುತ್ತಿದ್ದುದನ್ನು ಮೋರಿಗೇರಿಯ ೧೦೪೫ ಅಕ್ಟೋಬರ್ ೨೮ ರ ಶಾಸನ[2]ದಲ್ಲಿ ಬರುತ್ತದೆ. 'ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿಗಳ ಪಾದಪದ್ಮೋಜ ಜೀವಿಗಳಾಗಿ ಲೆಂಕಸಾಸಿರ್ವರು ಇದ್ದರು. ಇವರು ಆತನ ರಾಜ್ಯದ ಆಧಾರ ಸ್ಥಂಭಗಳಂತೆ ಇದ್ದರೆಂದು ಶಾಸನ ವರ್ಣಿಸಿದೆ, ಮೋರಗೇರಿಯಲ್ಲಿ ಇವರು ಲೆಂಕೇಶ್ವರ ದೇವಾಲಯವನ್ನು ಕಟ್ಟಿಸುತ್ತಾರೆ. ಅಲ್ಲದೆ ೨೪ ಜನರಿಗೆ ಛತ್ರವನ್ನು ಮಾಡಿಸಿ ಅದಕ್ಕೆ ದಾನವನ್ನು ಬಿಡುತ್ತಾರೆ. ಈ ಲೆಂಕ ಸಾಸಿರ್ವರ ಗುಣಾವಳಿಗಳನ್ನು, ಮಾಡಿದ ಕಾರ್ಯಗಳನ್ನು ಅತ್ಯಂತ ಮನೋಜ್ಞವಾಗಿ ಶಾಸನವು ವರ್ಣಿಸಿದೆ. ಲೆಂಕ ಸಾಸಿರ್ವರ ಪೇರ್ಮಾಡಿಯ ಮುಖ್ಯಸ್ಥನಾಗಿದ್ದನೆಂದು ಹೇಳಲಾಗಿದೆ. ಇವನು ಅಮ್ಮಳೆ, ನೆಲ್ಲಿಕುದಿರು, ಸೊನ್ನ, ಮೊಳಲ್ಗುಂದೆ, ಸೂಗುರು ಮತ್ತು ಮೋರಿಗೆರೆ ಇವುಗಳನ್ನು ಆಳುತ್ತಿದ್ದನು. ಮಠದ ವಿದ್ಯಾದಾನಕ್ಕೆಂದು

ಅರಸರಿಗೆ ಬಿನ್ನಪಮಾಡಿ 'ಸವಂಟಿಯಪಾಳಂ' ಪಡೆದು ಅದಕ್ಕೆ 'ಶಿವಪುರ'ವೆಂದು ಹೆಸರನ್ನಿಟ್ಟು ಸೋಮೇಶ್ವರ ಪಂಡಿತರಿಗೆ ಬಿಟ್ಟುದು ತಿಳಿದುಬರುತ್ತದೆ[೩]. ಮೋರಿಗೆರೆಯಲ್ಲಿ ತಪೋಧನರು ಮತ್ತು ಪಂಚಮಠದ ತಪೋಧನರೆಂಬ ಪರಂಪರೆಗಳು ಕಂಡು ಬರುವುದಿಲ್ಲ.

ಈ ಗ್ರಾಮವು ಭೌಗೋಳಿಕವಾಗಿ ತನ್ನದೇ ಆದ ಒಂದು ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಗ್ರಾಮವು ಸುತ್ತಮುತ್ತಲಿನ ಗಡಿ ಪ್ರದೇಶಗಳಿಂದ ಆವೃತವಾಗಿದ್ದು, ಪೂರ್ವಾದಲ್ಲಿ ಸೊನ್ನ, ಪಶ್ಚಿಮದಲ್ಲಿ ಹೊಳಗುಂದಿ, ಹಡಗಲಿ, ಉತ್ತರಕ್ಕೆ ಗದ್ದಿಕೇರಿ, ದಕ್ಷಿಣಕ್ಕೆ ಇಟ್ಟಗಿ ಗ್ರಾಮಗಳಿಂದ ಸುತ್ತುವರೆದಿದೆ.

ಮೋರಗೇರಿ ಗ್ರಾಮವು ಒಟ್ಟು ವಿಸ್ತೀರ್ಣ ೭೯೯೬ ಎಕರೆ ೨೨ಸೆಂಟ್ಸ್ ಭೂಮಿಯನ್ನು ಹೊಂದಿದೆ. ಈ ಗ್ರಾಮದಲ್ಲಿ ಮಳೆಯನ್ನು ಆಶ್ರಯಿಸಿರುವ ಭೂಮಿ ಹೆಚ್ಚಾಗಿದೆ. ಇಲ್ಲಿ ಯಾವ ನದಿಗಳು ನೀರಾವರಿ ಆಶ್ರಯವನ್ನು ಕೊಟ್ಟಿಲ್ಲ. ಈ ಗ್ರಾಮವು ಉಷ್ಣತೆಯಿಂದ ಕೂಡಿದ್ದು ಜನವರಿಯಿಂದ ಮೇ ತಿಂಗಳವರೆಗೆ ಬಿಸಿಲ ಹವೆಯಿಂದ ಕೂಡಿರುತ್ತದೆ. ಜೂನ್ ತಿಂಗಳಿಂದ ಡಿಸೆಂಬರ್ ತಿಂಗಳವರೆಗೆ ಸಾಮಾನ್ಯ ಮಳೆ ಸರಾಸರಿ ಮಳೆಯ ಪ್ರಮಾಣ ೬೨೦ ಮಿಲಿ ಮೀಟರ್ ಇದೆ.

ಈ ಪ್ರದೇಶದಲ್ಲಿ ಸ್ಮಶಾನದ ವಿಸ್ತೀರ್ಣ ಉಲ್ಲೇಖಿಸಬೇಕಾದರೆ ಈ ಗ್ರಾಮದಲ್ಲಿ ಸ್ಮಶಾನವನ್ನು ಎರಡು ಭಾಗಗಳು ಇವೆ. ೧) ಲಿಂಗಾಯುತರ ರುದ್ರಭೂಮಿ೨) ಅನುಸೂಚಿತ ಪಂಗಡಗಳ ರುದ್ರ ಭೂಮಿ ಇದೆ. ಲಿಂಗಾಯುತರ ಸ್ಮಶಾನದ ಭೂಮಿ ಪರಂಪೋಕು ೦.೨೩ ಸೆಂಟ್ಸ್ ಭೂಮಿ ಇದೆ. ಅನುಸೂಚಿತ ಪಂಗಡಗಳ ರುದ್ರ ಭೂಮಿ ೨ ಎಕರೆ ಇದೆ.

**ಮೋರಿಗೇರಿ**

| ಕ್ರಸಂಖ್ಯೆ | ವಿವರಗಳು | ವಿಸ್ತೀರ್ಣ |
|---|---|---|
| ೦೧ | ಸರಕಾರಿ ಖುಷ್ಕಿ | ೭೫೭೨.೧೮ |
| ೦೨ | ಅನಾಧೀನ | ೧೬.೫೧ |
| ೦೩ | ಕುಂಟಾಪರಂಪೋಕು | ೧೭.೮೫ |
| ೦೪ | ಗುಡಿ ಪರಂಪೋಕು | ೦೦.೨೫ |
| ೦೫ | ಗ್ರಾಮನತ್ತ | ೫೨.೨೨ |
| ೦೬ | ರಸ್ತೆ ಪರಂಪೋಕು | ೮೬.೫೦ |
| ೦೭ | ಹಳ್ಳಿ ಪರಂಪೋಕು | ೨೩೫.೨೦ |
| ೦೮ | ಸ್ಮಶಾನ ಪರಂಪೋಕು | ೦.೨೩ |
| ೦೯ | ಕರ್ನಾಟಕ ಸರ್ಕಾರ ೨೦೦೬-೦೭ | ೨.೦೦ |
| ೧೦ | ಬಾವಿ ಪರಂಪೋಕು ೨೦೦೭-೦೮ | ೪.೪೪ |
| ೧೧ | ಜಿಲ್ಲಾಧಿಕಾರಿಗಳ ಬಳ್ಳಾರಿ(ಭೂದಾನ) | ೩.೦೦ |
| ೧೨ | ಭೂ ಪರಿವರ್ತನ | ೦.೩೫ |
| ೧೩ | ಆಶ್ರಯ | ೫.೫೨ |
| | ಒಟ್ಟು = | ೭೯೯೬.೨೨ |

= ೭೯೯೬ ಎಕರೆ ೨೨ ಸೆಂಟ್ಸ್.

ಈ ಗ್ರಾಮವು ಸಾಲು ಮರಗಳಿಂದ ಆವೃತವಾಗಿದ್ದು ಜೊತೆಗೆ ಸುತ್ತಲೂ ಬಯಲು ಪ್ರದೇಶವನ್ನು ಹೊಂದಿದೆ. ಈ ಗ್ರಾಮದ ಸುತ್ತಲು ಖುಷ್ಕಿ ಒಣ ಭೂಮಿ ಇದೆ. ಅಲ್ಲಲ್ಲಿ ಸ್ವಲ್ಪ ಬೋರ್‌ವೆಲ್ ಗಳ ಸಹಾಯದಿಂದ ನೀರಾವರಿ ಆಶ್ರಯಿಸಿರುವ ಭೂಮಿ ಇದೆ. ಕೆರಗಳೆಂದರೆ ಗ್ರಾಮದ ಸುತ್ತ-ಮುತ್ತ ಹೊಲಗಳಲ್ಲಿ ಹಾದು ಹೋಗಿವೆ. ಆದ್ದರಿಂದ ಈ ಗ್ರಾಮಕ್ಕೆ ಮೂರುಕೆರೆ- ಮೋರಗೆರೆ ಎಂದು ಕರೆಯುತ್ತಾರೆ ಎನ್ನುವ ವಾಡಿಕೆ ಇದೆ.

ಮೋರಗೆರೆ ಗ್ರಾಮ ಮೂರು ಕೆರೆಗಳಿಂದ ಉದಯವಾಯಿತು ಎನ್ನುವ ಪೂರ್ವಜರ ಮಾತಿನಂತೆ ನೋಡಿದಾಗ ಮೂರು ಕೆರೆಗಳು ಯಾವುವು ಎಂಬುದು ತಿಳಿಯದಾಗಿದೆ. ಈ ಪ್ರದೇಶದಲ್ಲಿ ಅಲ್ಲಲ್ಲಿ ಸರಕಾರ ನಿರ್ಮಿಸಿರುವ ಚೆಕ್ ಡ್ಯಾಂಗಳು ಕಂಡು ಬರುತ್ತವೆ. ಈ ಚೆಕ್ ಡ್ಯಾಂಗಳು ಮಳೆ ಆಧಾರವಾಗಿವೆ. ಇಲ್ಲಿ ಯಾವ ನದಿಗಳು ಇರುವುದಿಲ್ಲ. ಅಲ್ಲಲ್ಲಿ ಬೋರ್‌ವೆಲ್‌ಗಳ ಸಹಾಯದಿಂದ ಸ್ವಲ್ಪಮಟ್ಟಿಗೆ ನೀರಾವರಿ ಸೌಲಭ್ಯವನ್ನು ಹೊಂದಿದೆ. ಇಲ್ಲಿ ಕೆಲವೊಂದು ಬಾವಿಗಳು ಜೀವಂತವಾಗಿದ್ದು, ಕೆಲವು ನೀರಿಲ್ಲದೆ ಹಾಳುಬಿದ್ದು, ಅಲ್ಲಿಯ ಜನರು ಹಾಕುವ ಕಸಕಡ್ಡಿಯಿಂದ ಮುಚ್ಚಿಹೋಗುವ ಹಂತದಲ್ಲಿವೆ. ಇಲ್ಲಿ ಕಂಡು ಬರುವ ಬಾವಿಗಳು. ಜನರ ಅಭಿಪ್ರಾಯದಂತೆ ಈ ಗ್ರಾಮದ ನೀರು ಎಷ್ಟು ಸಿಹಿಯಾಗಿರತ್ತೆಂದರೆ ಸೊಂಡೂರಿನ ರಾಜನ ಮಗಳು ಈ ಗ್ರಾಮದ ನೀರನ್ನು ತರಿಸಿಕೊಂಡು ಕುಡಿಯುತ್ತಿದ್ದಳು ಎಂಬ ಮಾತು ಜನರಲ್ಲಿ ಕೇಳಿಬರುತ್ತದೆ. ಪ್ರಸ್ತುತ ಈ ಬಾವಿಗಳನ್ನು ನೋಡಿದರೆ ಸಂಶಯ ಬರುತ್ತದೆ. ಈ ಬಾವಿಗಳು ವೃತ್ತಾಕಾರದ ಬಾವಿಗಳಾಗಿದ್ದು ಸು೨೦-೩೦ ಅಡಿಗಳ ಆಳವನ್ನು ಹೊಂದಿದೆ.

ಈ ಗ್ರಾಮವು ಆಯಕಟ್ಟಿನ ಸ್ಥಳಗಳಲ್ಲಿ ಪ್ರಮುಖವಾಗಿದೆಯೆನ್ನುವುದಕ್ಕೆ ಇಲ್ಲಿ ಕಂಡು ಬರುವ ಅಗಸೆಗಳು ಪ್ರಧಾನ ಕಾರಣ. ಇವುಗಳು ಅಗಸೆ ಎನ್ನುವುದಕ್ಕೆ ಯಾವುದೇ ಪ್ರಮುಖ ಕುರುಹುಗಳಿಲ್ಲ ಇಂತಹ ಅಗಸೆಗಳನ್ನು ಪ್ರತಿಯೊಂದು ಗ್ರಾಮಗಳಲ್ಲಿ ಕಂಡುಬರುತ್ತವೆ. ಆದರೆ ಸ್ಥಳೀಯರ ಹೇಳಿಕೆಯ ಪ್ರಕಾರ ಅಗಸೆಯ ಮುಂದೆ ನೆಡುತ್ತಿದ್ದ 'ಬುಡ್ಡೆಕಲ್ಲಿನ' ಆಧಾರದ ಮೇಲೆ ಅಲ್ಲಿಯ ಜನರು ಇಲ್ಲಿ ನಾಲ್ಕು ಅಗಸೆಗಳಿದ್ದವೆಂದು ಹೇಳುತ್ತಾರೆ. ಗ್ರಾಮಗಳಲ್ಲಿ ಅಗಸೆಗಳಮುಂದೆ ಬುಡ್ಡೆಕಲ್ಲುಗಳನ್ನು ಯಾಕೆ ನೆಡುತ್ತಿದ್ದರೆಂದರೆ ಊರಿನ ಗಡಿಗಳನ್ನು ಗುರುತಿಸಲಿಕ್ಕೆ ನಂತರ ಜನರ ವಾಡಿಕೆಯಂತೆ ಈ ಕಲ್ಲುಗಳನ್ನು ದಾಟಿ ಗ್ರಾಮದೊಳಗೆ ಯಾವುದೇ ಭೂತ, ಪಿಶಾಚಿ, ಹಾಗೂ ಮಾರಿರೋಗಗಳು ಪ್ರವೇಶಿಸಬಾರದು ಎಂಬ ರಕ್ಷಣೆ ದೃಷ್ಠಿಯಿಂದ ಹಾಗೂ ಗ್ರಾಮದ ಗಡಿಗಳನ್ನು ಸೂಚಿಸುತ್ತಿದ್ದವು.

ಇಲ್ಲಿ ಉದ್ದಿಬಸವೇಶ್ವರ ದೇವಾಲಯ, ಬ್ರಹ್ಮ(ಜಿನಾಲಯ)ದೇವಾಲಯ, ಕಲ್ಲುಗುಡಿ ಕಲ್ಲೇಶ್ವರ ದೇವಾಲಯ, ಮರಡಿ ದುರ್ಗಾಂಬಿಕ ದೇವಿ, ಬಾವಿ ಬಸವೇಶ್ವರ, ವೀರಭದ್ರೇಶ್ವರ ದೇವಾಲಯ, ಆಂಜನೇಯ ದೇವಾಲಯ. ಮುಂತಾದ ದೇವಾಲಯಗಳನ್ನು ಕಾಣಬಹುದು.

ಈ ಪ್ರದೇಶದಲ್ಲಿ ಕೆಂಪು ಮಣ್ಣು, ಕಪ್ಪು ಮಿಶ್ರಿತ ಮಣ್ಣು, ಕಪ್ಪು ಮಣ್ಣು ಗಳಿಂದ

ಕೂಡಿದ ಭೂಮಿ ವ್ಯವಸಾಯಕ್ಕೆ ಯೋಗ್ಯವಾಗಿದೆ. ಭೂಮಿಯೂ ಏರಿಳಿತಗಳಿಂದ ಕೂಡಿದೆ. ಮುಂಗಾರು ಬೆಳೆಯಾಗಿ ಜೋಳ, ಸಜ್ಜೆ, ಮೆಕ್ಕೆಜೋಳ, ರಾಗಿ, ಅಲಸಂದಿ, ತೊಗರೆಯನ್ನು ಬೆಳೆಯುತ್ತಾರೆ. ಹಿಂಗಾರು ಬೆಳೆಯಾಗಿ ಸೂರ್ಯಕಾಂತಿ, ಹತ್ತಿ ಮುಂತಾದವು ಇಲ್ಲಿಯ ಮುಖ್ಯ ವಾಣಿಜ್ಯ ಬೆಳೆಗಳಾಗಿವೆ.

ಇಲ್ಲಿಯ ಸುತ್ತಮುತ್ತಲಿನ ಬಯಲು ಪ್ರದೇಶಗಳಲ್ಲಿ ಪ್ರಾಣಿ ಪಕ್ಷಿಗಳು ಕಂಡುಬರುತ್ತವೆ. ಅವುಗಳಲ್ಲಿ ಗುಬ್ಬಿ, ಗಿಳಿ, ಕಾಗೆ, ಕೋಗಿಲೆ, ಹದ್ದು, ಪಾರಿವಾಳ, ರತ್ನಪಕ್ಷಿ, ಕೊಕ್ಕರೆಗಳು ಕಂಡುಬರುತ್ತವೆ. ಕಾಡು ಹಂದಿ, ನರಿ, ತೋಳ, ಕಂಡುಬರುತ್ತವೆ. ಹೀಗೆ ಮೋರಗೆರೆಯು ಪ್ರಾಚೀನ ಕಾಲದಿಂದಲೂ ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ ತನ್ನದೇ ಆದ ವಿಶೇಷತೆಯನ್ನು ಉಳಿಸಿಕೊಂಡು ಬಂದಿದೆ. ಆದರೆ ಈ ಪ್ರದೇಶದಲ್ಲಿ ಜಾಗತೀಕರಣದ ಹಿನ್ನಲೆಯಲ್ಲಿ ಅಲ್ಲಿಯ ಜನ ಬದುಕಿನ ಅವ್ಯವಸ್ಥೆ, ಪ್ರಾಚೀನಕಾಲದ ಕುರುಹುಗಳ ಮೇಲೆ ಆಗುವ ಪರಿಣಾಮದಿಂದ ನಾಶದ ಹಾದಿ ಹಿಡಿಯುವಲ್ಲಿ ಯಾವುದೇ ಸಂಶಯವಿಲ್ಲವೆಂದು ಹೇಳಬಹುದು.

## ಮೋರಗೆರೆಯ ಮರಡಿ ದುರ್ಗಾಂಬಿಕ ದೇವಿ

ಮೋರಗೇರಿ ಪರಿಸರದಲ್ಲಿ ಬರುವ ದೇವಾಲಯಗಳಲ್ಲಿ ಅತ್ಯಂತ ಪ್ರಸಿದ್ದ ಮತ್ತು ಜನರ ಆರಾಧ್ಯ ದೇವರು ಎಂದರೆ ಮರಡಿ ದುರ್ಗಾಂಬಿಕ ದೇವಿ. ಮೋರಗೆರೆಯ ಜನರ ಕುಲದೇವರು ಎಂದು ಉಲ್ಲೇಖಿಸಬಹುದು. ಈ ಪರಿಸರದಲ್ಲಿ ನಡೆಯುವ ಜಾತ್ರೆಗಳಲ್ಲಿ ಇದು ದೊಡ್ಡ ಜಾತ್ರೆ ಹಾಗೂ ವಿಶೇಷತೆಯನ್ನು ಪಡೆದುಕೊಂಡಿದೆ. ಈ ಗ್ರಾಮದಲ್ಲಿರುವ ದೇವತೆಗಳಲ್ಲಿ ಈ ಸ್ತ್ರೀ ದೇವತೆಯ ಜಾತ್ರೆ ಬಹಳ ದೊಡ್ಡದು. ಈ ದುರ್ಗಾಂಬಿಕ ಶಕ್ತಿ ಬಹಳ ವಿಶಿಷ್ಠವಾಗಿದೆ. ಈ ದೇವಿಯ ಜಾತ್ರೆಗೆ ಪರಸ್ಥಳದಿಂದ ಭಕ್ತಾಧಿಗಳು ಆಗಮಿಸುತ್ತಾರೆ. ಮರಡಿ ದುರ್ಗಾಂಬಿಕೆಯ ದೇವಾಲಯದ ಮೂಲ ಗ್ರಾಮದಿಂದ ಒಂದು ಕಿ.ಮೀ. ದೂರದ ಮರಡಿಯಲ್ಲಿದೆ. ಈ ದೇವಾಲಯ ಪ್ರಾಚೀನ ದೇವಾಲಯವಾಗಿದೆ. ವಿನಾಶದ ಅಂಚಿನಲ್ಲಿರುವ ಈ ದೇವಾಲಯವನ್ನು ಜೀರ್ಣೋದ್ಧಾರಮಾಡಲು ಗ್ರಾಮಸ್ಥರು ಪ್ರಯತ್ನಪಟ್ಟಿದ್ದಾರೆ. ಅದಕ್ಕಾಗಿ ಮೋರಗೆರೆಯ ಗ್ರಾಮಸ್ಥರು ಊರಲ್ಲಿ ಒಂದು ಮರಡಿ ದುರ್ಗಾಂಬಿಕೆ ದೇವಿಯ ದೇವಾಲಯವನ್ನು ನಿರ್ಮಿಸಿದ್ದಾರೆ. ಪ್ರತಿವರ್ಷ ಜಾತ್ರೆಯ ಸಮಯದಲ್ಲಿ ದೇವರನ್ನು ಮೂಲ ಸ್ಥಳಕ್ಕೆ ಕರೆದುಕೊಂಡು ಹೋಗಿ ಬರುತ್ತಾರೆ.

ಮೋರಗೆರೆಯಲ್ಲಿ ಕಂಡುಬರುವ ಇತರ ಕಟ್ಟಡಗಳು ಎಂದರೆ ಎರಡು ಪ್ರಾಥಾಮಿಕ ಶಾಲೆಗಳಿವೆ. ಒಂದು ಪ್ರೌಢಶಾಲೆಯಿದೆ. ಒಂದು ಪದವಿ ಪೂರ್ವ ಕಾಲೇಜು ಇದೆ. ಒಂದು ಸಾರ್ವಜನಿಕ ಸರಕಾರಿ ಆಸ್ಪತ್ರೆ, ಪಶು ವೈದ್ಯ ಆಸ್ಪತ್ರೆ, ಸಾರ್ವಜನಿಕ ಗ್ರಂಥಾಲಯ, ಸಮೂದಾಯಭವನ, ಪ್ರಗತಿ ಗ್ರಾಮೀಣ ಬ್ಯಾಂಕ್ ಇನ್ನೂ ಮುಂತಾದ ಕಛೇರಿಗಳಿವೆ. ಜೊತೆಗೆ ಅನೇಕ ರೀತೀಯ ಸೌಕರ್ಯಗಳನ್ನು ಪಡೆದುಕೊಳ್ಳಬೇಕಾಗಿದೆ.

## ಮೋರಗೆರೆ ಪರಿಸರದಲ್ಲಿ ಕಂಡುಬರುವ ಸ್ಥಳಗಳು



## ಹಗರಿಬೊಮ್ಮನಹಳ್ಳಿ

ಇದು ಮೋರಗೆರೆಯಿಂದ ಸುಮಾರು ೧೫ ಕಿ.ಮೀ.ದೂರದಲ್ಲಿದೆ. ಬಳ್ಳಾರಿಯಿಂದ ಸುಮಾರು ೧೦೦ ಕಿ.ಮೀ. ದೂರದಲ್ಲಿರುವ ಹಗರಿಬೊಮ್ಮನಹಳ್ಳಿ ಹರಪನಹಳ್ಳಿಯ ಪಾಳೆಗಾರರ ಸ್ಥಳವಾಗಿತ್ತು. ಹಗರಿಬೊಮ್ಮನಹಳ್ಳಿಯು ಒಂದು ಗ್ರಾಮ ಗ್ರಾಮಕ್ಕೆ ಹಿಂದೆ ರಾಮನಗರ ಎಂಬ ಪ್ರತಿತಿ ಇತ್ತೆಂಬುದನ್ನು ಅನೇಕ ಜನಸಾಮಾನ್ಯರ ಆಡುಮಾತಾಗಿದೆ. ಕರ್ನಾಟಕದ ಭೂಪಟದಲ್ಲಿ ತನ್ನದೇ ಆದ ವಿಶಿಷ್ಠ ಸ್ಥಾನವನ್ನು ಪಡೆದಿರುವ ಬಳ್ಳಾರಿ ಜಿಲ್ಲೆ. ಈ ಜಿಲ್ಲೆಯಲ್ಲಿ ಒಂದಾದ ಈ ಗ್ರಾಮವು ಈಗ ತಾಲೂಕು ಆಗಿದೆ.[೪] ಟಿಪ್ಪು ಸುಲ್ತಾನನು ಚಿತ್ರದುರ್ಗ ನಾಯಕರ ಜೊತೆ ಸತತವಾಗಿ ಏಳು ದಿನ ದಾಳಿ ನಡೆಸಿದಾಗ್ಯೂ ದುರ್ಗ ಅವನ ಕೈವಶವಾಗಲಿಲ್ಲ. ಈ ವಿಷಯವನ್ನು ತಿಳಿದ ಸೋಮಶೇಖರ ಬಸಪ್ಪನಾಯಕನು ಸುಲ್ತಾನನಿಂದ ಮೆಚ್ಚುಗೆ ಪಡೆಯಲು ಇದೇ ಸೂಕ್ತ ಸಮಯವೆಂದು ಭಾವಿಸಿ ತನ್ನ ಸೈನ್ಯದೊಂದಿಗೆ ಕೊಪ್ಪಳಕ್ಕೆ ಧಾವಿಸಿಬಂದನು. ಸುಲ್ತಾನನಿಗೆ ದುರ್ಗವನ್ನು ಗೆಲ್ಲಲು ಸಹಾಯ ಮಾಡಿದನು. ದುರ್ಗವನ್ನು ವಶಪಡಿಸಿಕೊಂಡು ಜಯಘೋಷವನ್ನು ಸಾರಿ, ಮರಳಿ ನಾರಾಯಣ ದೇವರ ಕೆರೆಯ ಮಾರ್ಗವಾಗಿ ಹೊರಟ ಸುಲ್ತಾನನು ತನ್ನ ಹೇಳಿಕೆಯಂತೆ ಊರಿನ ದೇವರಿಗೆ ಕಾಣಿಕೆ ರೂಪವಾಗಿ ಮೂರು ರತ್ನ ಕೀರೀಟಗಳನ್ನು ನೀಡಿದನು. ಬಹಿರಂಗವಾಗಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದ ಸುಲ್ತಾನನಿಗೆ, ಒಳಗೊಳಗೇ ನಾಯಕನಬಗ್ಗೆ ಅಸೂಯೆ ಹಾಗೂ ಭಯವಿದ್ದೇ ಇತ್ತು. ಏಕೆಂದರೆ ಇಂಥ ಶೂರನಾಯಕನು ಎಂದಾದರೊಂದು ದಿನ ಯಾವ ಕಾರಣಕ್ಕೆ ಆಗಲಿ ತನ್ನಮೇಲೆ ಕೈ ಮಾಡಿದರೆ ಹೇಗೆ ಎಂದು ದುರಾಲೋಚನೆ ಮಾಡಿದನು. ಆದರೂ ಅದನ್ನು ತೋರಗೊಡದೆ ನಾರಾಯಣ ದೇವರ ಕೆರೆಯಿಂದ ಹೊರಟು ಬರಬೇಕೆಂದು ಬಸಪ್ಪನಾಯಕನಿಗೆ ದೂತರ ಮುಖಾಂತರ ಹೇಳಿ ಕಳಿಸಿದನು. ಈ ವಾರ್ತೆಯನ್ನು ಕೇಳಿದ ನಾಯಕನು ಉಬ್ಬಿಹೋದನು. ಆದರೆ ಬಸಪ್ಪನಾಯಕನಿಗೆ ಹಿತ್ಯೆಷಿಯೂ, ಅರಸೀಕೇರಿಯ ಅಮಾತ್ಯನಾದ ಹಂಪರಸಪ್ಪನು ಇದಕ್ಕೆ ಒಪ್ಪಲಿಲ್ಲ. ಇದರಲ್ಲಿ ಏನೋ ಅಪಾಯವಿದೆ. ಎಂದು ನಾಯಕನಿಗೆ ತಿಳಿಸಿದನು. ಪಾರಿತೋಷಕವನ್ನು ನೀಡಲು ಹರಪನಹಳ್ಳಿಯು ಲೊಕಮಾನ್ಯ ಸ್ಥಳ ಆದ್ಯಾಗ್ಯೂ ಕುಗ್ರಾಮವಾದ ಹಗರಿಬೊಮ್ಮನಹಳ್ಳಿಯನ್ನು ಆರಿಸಿದುದು ಸಂಶಯಾಸ್ಪದವಾದುದೆಂದು. ಬಸಪ್ಪನಾಯಕನಿಗೆ ಪರಿಪರಿಯಾಗಿ ಹೇಳಿದನು. ಆದರೆ ಅದ್ವಿತೀಯ ಶೂರನಾದ ತನ್ನನ್ನು ಅದು ತನ್ನ ರಾಜಧಾನಿಯ ಹತ್ತಿರದಲ್ಲಿಯೇ ಏನು ಮಾಡಬಲ್ಲನು ಎಂದು ಬಸಪ್ಪನಾಯಕನ ಎಣಿಕೆಯಾಗಿತ್ತು. ಹೀಗಾಗಿ ಹಗರಿಬೊಮ್ಮನಹಳ್ಳಿಗೆ ಹೋಗಲೇಬೇಕೆಂದು ತೀರ್ಮಾನಿಸಿದಾಗ ಕಡೆಯ ಪಕ್ಷ, ರಾಜ ಸ್ತ್ರೀಯರನ್ನು ಬಿಟ್ಟು ಕೆಲವೇ ಪರಿವಾರ ಜನರೊಂದಿಗೆ, ಹೋಗುವಂತೆ ಹಂಪರಸನು ಸಲಹೆ ಮಾಡಿದನು. ಅದರಂತೆಯೇ ಬಸಪ್ಪನಾಯಕನು, ತನ್ನೊಂದಿಗೆ ತನ್ನ ಅಣ್ಣನಾದ ಅಯ್ಯಪ್ಪನನ್ನು, ಅಣ್ಣನ ಇಬ್ಬರು ಮಕ್ಕಳನ್ನು, ಹಲವು ಶೂರ ನಾಯಕರನ್ನು ಕರೆದುಕೊಂಡು ಹಗರಿಬೊಮ್ಮನಹಳ್ಳಿಗೆ ತೆರಳಿದನು. ಬಹುಶಃ ವಿಧಿಯು ಈ ಭೇಟಿಯ

ನೆಪದಲ್ಲಿಯೇ ಹರಪನಹಳ್ಳಿ ಹಾಗೂ ನಾರಾಯಣದೇವರ ಕೆರೆಯ, ಭವ್ಯ ಭವಿಷ್ಯತ್ತಿಗೆ ಕೊನೆಯ ತೆರೆಯನ್ನು ಎಳೆಯಿತು. ಅಂದರೆ ಹಗರಿಬೊಮ್ಮನಹಳ್ಳಿಯು ಹರಪನಹಳ್ಳಿಯ ಪಾಳೇಗಾರರ ಅಧೀನದಲ್ಲಿತ್ತು ಎಂದು ತಿಳಿದುಬರುತ್ತದೆ.

ಕರ್ನಾಟಕದ ಭೂಪಟದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿರುವ ಬಳ್ಳಾರಿ ಜಿಲ್ಲೆ, ವಿಜಯನಗರ ಸಾಮ್ರಾಜ್ಯದ ಹಂಪೆಗೆ, ಬಿಸಿಲಿಗೆ, ಹಾಗೂ ತುಂಗಾಭದ್ರಾ ಆಣೆಕಟ್ಟೆಗೆ ಪ್ರಸಿದ್ದವಾಗಿದೆ. ಈ ಜಿಲ್ಲೆಯಲ್ಲಿ ಈಗ ಬಳ್ಳಾರಿ, ಸಿರುಗುಪ್ಪ, ಸೊಂಡೂರು, ಕೂಡ್ಲಿಗಿ, ಹೊಸಪೇಟೆ, ಹಗರಿಬೊಮ್ಮನಹಳ್ಳಿ ಮತ್ತು ಹೂವಿನ ಹಡಗಲಿ ಸೇರಿ ೭ ತಾಲೂಕುಗಳಿವೆ.

ಹಗರಿಬೊಮ್ಮನಹಳ್ಳಿ ಯಾವ ಐತಿಹಾಸಿಕ ಹಿನ್ನಲೆ ಇಲ್ಲದ ವರ್ತಮಾದ ಊರಾಗಿದೆ. ಬೊಮ್ಮನಹಳ್ಳಿ ಎಂದ ತಕ್ಷಣ ನಮಗೆ ರಾಷ್ಟ್ರಕವಿ ಕುವೆಂಪುರವರ "ಬೊಮ್ಮನಹಳ್ಳಿ ಕಿಂದರಜೋಗಿ" ಕೃತಿ ನೆನಪಾಗುತ್ತದೆ. ಆದರೆ ಆ ಕೃತಿಗೂ ಈ ಬೊಮ್ಮನಹಳ್ಳಿಗೂ ಯಾವುದೇ ಸಂಬಂಧವಿಲ್ಲ. ನಮ್ಮ ಇತಿಹಾಸದುದ್ದಕ್ಕೂ ನದಿದಂಡೆಯಲ್ಲಿ ನಗರ ಸಂಸ್ಕೃತಿಗಳು ಬೆಳೆದಿದ್ದು ಕಂಡುಬರುತ್ತದೆ. ಹಾಗೇಯೇ ಹಗರಿಬೊಮ್ಮನಹಳ್ಳಿ ಕೂಡಾ, ಹಗರಿದಂಡೆಯಲ್ಲಿರುವ ಊರುಗಳನ್ನು ಗುರುತಿಸುವ ಸಲುವಾಗಿ ಹಗರಿ ಸೇರಿಸಿ ಹೇಳುವುದು ರೂಢಿಯಾಗಿ ಬೆಳೆದುಬಂದಿದೆ. ಉದಾಹರಣೆಗೆ ಹಗರಿಕ್ಯಾದಿಗೆಹಳ್ಳಿ, ಹಗರಿಗಜಾಪುರ, ಹಗರಿಬೊಮ್ಮನಹಳ್ಳಿ.

ಸಮುದ್ರ ಮಟ್ಟದಿಂದ ೫೧೩ ಮೀಟರ್ ಎತ್ತರದಲ್ಲಿರುವ ಈ ತಾಲ್ಲೂಕು ೭೫°–೪೦° ಮತ್ತು ೭೭°-೧೧° ರೇಖಾಂಶ ಮತ್ತು ೧೪°–೧೩° ಮತ್ತು ೧೫°–೫೦° ಅಕ್ಷಾಂಶದ ಮಧ್ಯೆಇರುವ ಬಳ್ಳಾರಿ ಜಿಲ್ಲೆಯಲ್ಲಿ ಈ ತಾಲೂಕು ವಿಸ್ತರಿಸಿದೆ.

ಹಗರಿಬೊಮ್ಮನಹಳ್ಳಿಗೆ ಈ ಹೆಸರು ಬರಲು ಕಾರಣ. ಹಿಂದಿನ ಕಾಲದಲ್ಲಿ ನಮ್ಮ ಹಿರಿಯರು ಭೋರ್ಗರೆದು ಹರಿಯುತ್ತಿದ್ದ ತುಂಗಾಭದ್ರಾ ತೀರದಲ್ಲಿ ನೆಲೆಸಿದ್ದರು. ಅವರಿಗೆ ಬಳಾರಿಯ ಪಕ್ಕದಲ್ಲಿ ವಿಶಾಲವಾಗಿ ಪ್ರವಹಿಸುವ ನದಿಯು ಹಳ್ಳದಂತೆ ಕಂಡಿತು, ಅದನ್ನು 'ಹಗರಿ'ಎಂದರು, ಅದಕ್ಕಿಂತ ಕೊಂಚ ಕಿರಿದಾದ ಮತ್ತೊಂದು ಪ್ರವಾಹವನ್ನು ಚಿಕ್ಕಹಗರಿಎಂದರು. ಈ ಚಿಕ್ಕಹಗರಿ(ಪಗರೆ)ಯ ದಡದಲ್ಲಿರುವ ಬೊಮ್ಮ(ಬ್ರಹ್ಮ)ನಹಳ್ಳಿಯೇ ಈಗ ಹಗರಿಬೊಮ್ಮನಹಳ್ಳಿಯಾಗಿದೆ.[೫]

**ಸೊನ್ನ :**

ಮೋರಗೇರಿಯಿಂದ ೨ಕಿ.ಮೀ. ದೂರದಲ್ಲಿರುವ ಸೊನ್ನದಲ್ಲಿರುವ ರಾಮಲಿಂಗೇಶ್ವರ ದೇವಾಲಯ ಕ್ರಿ.ಶ.೧೨ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದೆ.[೬] ಈ ದೇವಾಲಯವು ಗರ್ಭಗೃಹ ಹಾಗೂ ಅಂತರಾಳಗಳನ್ನು ಮಾತ್ರ ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗ ಹಾಗೂ ಅಂತರಾಳದಲ್ಲಿ ನಂದಿ ಇದರ ಹೊರಭಾಗದಲ್ಲಿ

ಶಿವನ ಶಿಲ್ಪಗಳಿವೆ. ಈ ದೇವಾಲಯವನ್ನು ಮರ ಮತ್ತು ಕಣಶಿಲೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯವನ್ನು ಗಮನಿಸಿದರೆ ಮೋರಗೆರೆಯಲ್ಲಿ ಕಲ್ಯಾಣಿ ಚಾಲುಕ್ಯರು ನಿರ್ಮಿಸಿರುವ ದೇವಾಲಯಗಳಿಗೂ ನಿಕಟವಾದ ಸಂಬಂಧವಿದೆ.

ಕ್ರಿ.ಶ. ಸು೧೨ನೇಯ ಶತಮಾನದ 'ಕಲ್ಯಾಣಿ ಚಾಲುಕ್ಯರ ಮತ್ತೊಂದು ದೇವಾಲಯ ಈಶ್ವರ. ಅದೇ ಗ್ರಾಮದಲ್ಲಿರುವ ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳಗಳಿವೆ. ಇದರ ಉಳಿದ ಭಾಗಗಳು ಹಾಳಾಗಿವೆ. ಗರ್ಭಗೃಹದಲ್ಲಿ ಶಿವಲಿಂಗ, ಅಂತರಾಳದಲ್ಲಿ ನಂದಿ ಶಿಲ್ಪಗಳಿವೆ. ಈ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ಈ ದೇವಾಲಯದ ಶೈಲಿ ಮತ್ತು ಮೊರಗೆರೆಯಲ್ಲಿರುವ ಕಲ್ಯಾಣಿ ಚಾಲುಕ್ಯರ ಶೈಲಿ ಒಂದೇ. ಕಲ್ಯಾಣಿ ಚಾಲುಕ್ಯರು ಕ್ರಿ.ಶ. ಸು೧೨ನೇ ಶತಮಾನದಲ್ಲಿ ಸೊನ್ನ ಮತ್ತು ಮೋರಗೇರಿಯಲ್ಲಿ ದೇವಾಲಯಗಳನ್ನು ನಿರ್ಮಾಣಮಾಡಿದ್ದಾರೆ.

ಈ ಪ್ರದೇಶಕ್ಕೆ 'ಸೊನ್ನ' ಎಂಬ ಹೆಸರು ಬರಲು ಮೂಲ ಕಾರಣವೇನೆಂದರೆ ಸೊನ್ನದಲ್ಲಿ ವಾಸವಾಗಿರುವ ಪುರುಷರು ಮೂಲತವಾಗಿ ಮೋರಗೇರಿಯಿಂದ ಈ ಪ್ರದೇಶಕ್ಕೆ ವಲಸೆಬಂದರು. ಅವರು ವಲಸೆಬರಲು ಕಾರಣವೇನೆಂದರೆ ಮೋರಿಗೇರಿಯಲ್ಲಿ ಮಾರಕ ಕಾಯಿಲೆ ಹರಡಿತು. ಆ ಕಾಯಿಲೆಯಿಂದ ಮರಣ ಹೊಂದುತ್ತಾ ಬಂದರು. ಇದರಿಂದ ಬೇಸತ್ತ ಜನಗಳು ಈ ಪ್ರದೇಶಕ್ಕೆ ವಲಸೆಬಂದರು. ಈ ಜನರು ಆಭರಣಗಳನ್ನು ತಯಾರಿಸುವವರಾಗಿದ್ದರು. ಈ ಪ್ರದೇಶದ ಮೂಲ ನಿವಾಸಿಗಳಾದ ಅಕ್ಕಸಾಲಿಗರು ಈ ಪ್ರದೇಶದಲ್ಲಿ ಅನೇಕ ರೀತಿಯ ಬಂಗಾರದ ಆಭರಣಗಳನ್ನು ತಯಾರಿಸುತ್ತಿದ್ದರು. ಆದ್ದರಿಂದ ಈ ಪ್ರದೇಶಕ್ಕೆ ಸುವರ್ಣ ಎಂದು ಅದರ ತಿರುಳಿನಿಂದ ಸೊನ್ನವಾಗಿ ಪರಿವರ್ತನೆಹೊಂದಿತು. 'ಸೊನ ಎನ್ನವ ಪದ ಹಿಂದಿ ಭಾಷೆಯಲ್ಲಿದೆ'. ಸೊನಾ ಎಂದರೆ ಬಂಗಾರ ಅಥವಾ ಸುವರ್ಣ ಎಂದರ್ಥ. ಈ ಗ್ರಾಮಕ್ಕೆ ಸೊನ್ನ ಎಂದು ಕರೆಯುತ್ತಾರೆ.

ಒಂದು ಮೂಲದ ಪ್ರಕಾರ ಕ್ರಿ.ಶ.ಸು.೧೨ನೇ ಶತಮಾನದಲ್ಲಿ ಕಲ್ಯಾಣಿಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ನಾಣ್ಯಗಳನ್ನು ಟಂಕಿಸುವ ಟಂಕಸಾಲೆಗಳಿದ್ದವು ಎಂಬುದು ತಿಳಿದುಬರುತ್ತದೆ.

**ಕೋಗಳಿ**

ಮೋರಗೇರಿಯಿಂದ ಸುಮಾರು ೨೦ ಕಿ.ಮೀ.ದೂರದಲ್ಲಿದೆ. 'ಕೋಗಳಿ'ಯನ್ನು ರಾಜಧಾನಿಯನ್ನಾಗಿ ಹೊಂದಿ ಅದರ ಸುತ್ತಮುತ್ತಲ ೫೦೦ ಗ್ರಾಮಗಳನ್ನೊಳಗೊಂಡ ವಿಭಾಗವೇ ಕೋಗಳಿ ೫೦೦. ಈಗ ಕೋಗಳಿ ಹಗರಿಬೊಮ್ಮನಹಳ್ಳಿ ತಾಲೂಕಿನ ಚಿಕ್ಕಗ್ರಾಮ. ಆದರೆ ಪ್ರಾಚೀನ ಕಾಲದಲ್ಲಿ ಪ್ರಸಿದ್ಧ ನಗರವಾಗಿ ೫೦೦ ಗ್ರಾಮಗಳಿಗೆ ರಾಜಧಾನಿಯಾದ ಇದು ಜೈನರ ಕೇಂದ್ರವಾಗಿ ಜನಪ್ರಿಯವಾಗಿತ್ತು. ಕ್ರಿ.ಶ.೫೮೯-೫೭೦ರವರೆಗೆ ಆಳಿದ ಗಂಗದೊರೆ ದುರ್ವಿನೀತನು ಕೋಗಳಿಯಲ್ಲಿ ಬಸದಿ ನಿರ್ಮಿಸಿದುದನ್ನು ಶಾಸನ[೮] ತಿಳಿಸುತ್ತದೆ.

ಅಲ್ಲದೆ ಕನ್ನಡದ ಉಪಲಬ್ಧ ಪ್ರಥಮ ಗದ್ಯಕೃತಿ 'ವಡ್ಡಾರಾಧನೆ'ಯಲ್ಲಿ 'ಕೋಗಳಿ'ಯ ಪ್ರಸ್ತಾಪವಿದೆ. 'ಕಾರ್ತೀಕ ಋಷಿ' ಕಥೆಯಲ್ಲಿ ಕಾರ್ತೀಕನ ಸಹೋದರಿ ವೀರಶ್ರೀಯನ್ನು ಕೋಗಳಿಯ ಅರಸ ಕ್ರೌಂಚನಿಗೆ ಕೊಟ್ಟು ವಿವಾಹ ಮಾಡಲಾಗುತ್ತದೆ. ಮುಂದೆ ಕಾರ್ತೀಕ ಋಷಿ ಸಂಚರಿಸುತ್ತಾ ಕೋಗಳಿಗೆ ಬರುತ್ತಾನೆ. ಈತನನ್ನು ಗುರುತಿಸಿದ ವೀರಶ್ರೀ 'ಚರರಿಗೆಗೆ' ಅರಮನೆಗೆ ಬರಲು ವಿನಂತಿಸುತ್ತಾಳೆ ಈ ದೃಶ್ಯನೋಡಿದ ಕ್ರೌಂಚ ತಪ್ಪುಭಾವಿಸಿ 'ನಿಚ್ಚಲೀ ಸವಣನಲ್ಲಿಗೆ ಪರಿವಳೆಂದು ರೆನಿಸಿ' ಶಕ್ತಾಯುಧದಿಂದ ಋಷಿಯನ್ನು ಹೊಡೆದು ವೀರಶ್ರೀಯ ಕೂದಲು ಹಿಡಿದು ಎಳೆದುಕೊಂಡು ಹೋಗುತ್ತಾನೆ. ಕಾರ್ತಿಕ ಋಷಿಯ ಅಜ್ಜಿ ವೀರಮತಿ ಮಹಾದೇವಿ ಬ್ರಹ್ಮಚರ್ಯ ವ್ರತದಿಂದ 'ವ್ಯಂತರದೇವತ'ಯಾಗಿ ಹುಟ್ಟಿದುದರಿಂದ ಆಕೆ ಋಷಿಯಲ್ಲಿಗೆ ಬಂದು 'ಭಟಾರ' ಇವರೆಲ್ಲರನ್ನು ಕೊಲ್ಲಲೇ ಎಂದು ಕೇಳಿದಾಗ ನೀನು ನನ್ನನ್ನು ತಂಪಾದ ಪ್ರದೇಶಕ್ಕೆ ತೆಗೆದುಕೊಂಡು ಹೋಗು ಎನ್ನುತ್ತಾನೆ. ಆಗ ಆ ದೇವತೆ "ನವಿಲು ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು ಕೋಗಳಿಯ ಮೂಡಲ ದೆಸೆಯ ಪರ್ವತದ ಕೊಳದ ತಡಿಯಳ್ ಲತಾಮಂಟಪದೊಳಿರಿಸಿ" ಹೋಗುತ್ತಾಳೆ. ಅಲ್ಲಿಯೇ ಕಾರ್ತೀಕ ಋಷಿ ಮರಣಹೊಂದುತ್ತಾನೆ. ಆ ಸ್ಥಳದಲ್ಲಿ ಸಹೋದರಿ ವೀರಶ್ರೀ ಬಸದಿ ನಿರ್ಮಿಸುತ್ತಾಳೆ. ಹೀಗೆ ಕೋಗಳಿ ರಾಜಧಾನಿಯಾಗಿ ಜೈನರ ಪ್ರಮುಖ ಕೇಂದ್ರವಾಯಿತು.

ಶಾಸನಗಳು ಕೋಗಳಿ ನಾಡನ್ನು ಸೊಗಸಾಗಿ ವರ್ಣಿಸಿವೆ. ಮೋರಗೆರೆ್ ಶಾಸನ 'ವಾರಿಧಿ ಪರಿವೃತಧಾತ್ರೀನಾರಿಯ ವದನದ ಪೊಲೆಸೆದ ಕೋಗಳಿ ನಾಡು' ಎಂದಿದೆ. ಸಮುದ್ರದಿಂದ ಆವೃತವಾಗಿರುವ ಭೂಮಿ ಎಂಬ ಸುಂದರ ಸ್ತ್ರೀಯರ ಮುಖದಂತೆ ಕೋಗಳಿನಾಡು ಶೋಭಾಯಮಾನವಾಗಿ ಕಂಗೋಳಿಸುತಿತ್ತು.

ವೋರಿಗೆರಿಂಯ ೧೦೪೫ ಆಕ್ಟೋಬರ್ ೨೮ರ ಶಾಸನದ[೧೦]ಲ್ಲಿ ತ್ರೈಲೋಕ್ಯಮಲ್ಲನ್ನಿನೊಳಂಬನು ಬಲ್ಲಕುಂದೆ ೩೦೦. ಕೋಗಳಿ ೫೦೦, ಕದಂಬಳಿಗೆ ೧೦೦೦, ಕುಡಿಹಾರ ೭೦ನ್ನು ಆಳುತ್ತಿದ್ದನು. ಕೋಗಳಿನಾಡು ಮೋರಿಗೆರೆ ಪರಿಸರದಲ್ಲಿತ್ತು ಎಂಬುದನ್ನು ತಿಳಿಯಬಹುದಾಗಿದೆ.

**ಹೊಳಗುಂದಿ**

ಬಳ್ಳಾರಿ ಜಿಲ್ಲೆಯ ತಾಲ್ಲೂಕಿನ ಸ್ಥಳವಾದ ಹೂವಿನಹಡಗಲಿ ಪಟ್ಟಣದ ಪೂರ್ವದಿಕ್ಕಿಗೆ ಸುಮಾರು ೮.ಕಿಮೀ. ದೂರದಲ್ಲಿರುವ ಗ್ರಾಮವೇ ಹೊಳಗುಂದಿ ಎಂಬುವ ಹೆಸರಿನ ಗ್ರಾಮವೊಂದಿದೆ.

ಏಳುಗುಂದಿ– ಸ್ಥಳೀಯರಲ್ಲಿ ಕೆಲವರು ಹೇಳುವಂತೆ, ಏಳು ಗ್ರಾಮಗಳು ಸೇರಿ 'ಏಳುಗುಂದಿ'ಯಾಗಿ ನಂತರ 'ಹೊಳಗುಂದಿ'ಆಯಿತು. ಅದಕ್ಕೆ ಆಧಾರವಾಗಿ ಹೊಳಗುಂದಿಯಿಂದ ವಾಯುವ್ಯ ದಿಕ್ಕಿಗೆ ಸುಮಾರು ೩ ಕಿ.ಮೀ. ದೂರದಲ್ಲಿ ಹಾಳಾದ 'ವೀರಾಪುರ' ಎಂಬ ಗ್ರಾಮವೊಂದಿದೆ. ಮನೆಗಳು ಅಥವಾ ದೇವಾಲಯಗಳಿದ್ದ

ಕುರುಹುಗಳೇನೂ ತೋರುವುದಿಲ್ಲ. ಅಲ್ಲಿಯ ಜಮೀನನ್ನು 'ವೀರಾಪುರ'ದ ಉತ್ತರ ದಿಕ್ಕಿಗಿರುವ ದಾಸನಹಳ್ಳಿಯವರು ಮತ್ತು ಹೊಳಗುಂದಿಯವರು ಕೃಷಿ ಮಾಡುತ್ತಾರೆ. ಅಲ್ಲಿ ಒಂದು ಕೆರೆ ಇತ್ತೆಂದು ಹೇಳುತ್ತಾರೆ. ಈಗಲೂ ಹೊಳಗುಂದಿಯ ರೈತರು ಅಲ್ಲಿಯ ತಮ್ಮ ಜಮೀನುಗಳಿಗೆ 'ವೀರಾಪುರ ಕೆರೆ ಹೊಲ' ಎಂದೇ ಕರೆಯುತ್ತಾರೆ.

ಇನ್ನೊಂದು 'ಭೈರಾಪುರ'ಎಂದು ಹಾಳಾದ ಗ್ರಾಮ ಹೊಳಗುಂದಿಯಿಂದ ಈಶಾನ್ಯ ದಿಕ್ಕಿಗೆ ಸುಮಾರು ೩ ಕಿ.ಮೀ. ದೂರದಲ್ಲಿದೆ. ಆಂಜನೇಯ ದೇವಸ್ಥಾನವಿದೆ ಈ ಗ್ರಾಮದ ಹೆಸರು. ಬಯಾಕರ ರಾಮಪ್ಪಯ್ಯನು ನೀಡಿದ ದಾನ ಶಾಸನದಲ್ಲಿ ಉಲ್ಲೇಖಗೊಂಡಿದೆ. ಭೈರಾಪುರದ ಪಶ್ಚಿಮಕ್ಕೆ ಸುಮಾರು ೨ ಕಿ.ಮೀ. ದೂರದಲ್ಲಿರುವ ಜಮೀನುಗಳಿಗೆಲ್ಲಾ 'ಅರಕೆರೆ' ಎನ್ನುತ್ತಾರೆ. ಹೊಳಗುಂದಿಯ ಶಾಸನ[೧೧]ವೊಂದರಲ್ಲಿ ಆರಗೆರೆಯ ಕೆಳಗೆ ಗದ್ದೆ ಮತ್ತೊಂದು ೧ ಎಂಬುವ ಉಲ್ಲೇಖವಿದೆ.

ಮೇಲಿನ ವೀರಾಪುರ ಮತ್ತು ಭೈರಾಪುರ ಎಂಬುವ ಎರಡು ಗ್ರಾಮಗಳು ಹೊಳಗುಂದಿಗೆ ಸೇರಿರಬಹುದೆಂದು ಊಹಿಸಿದರೂ 'ಏಳುಗುಂದಿ'ಆಗಲು, ಇನ್ನೂ ಐದು ಗ್ರಾಮಗಳ ಕುರುಹು ಸುತ್ತಲಿನಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಆದುದರಿಂದ 'ಏಳುಗುಂದಿ'ಯು ಮೊದಲು ಯಾರಿಂದಲೋ ಕಲ್ಪನೆಯಿಂದ ಬಾಯಿಗೆ ಹರಿದು ಬಂದಂತೆ ತೋರುತ್ತದೆ. ಹೊಳಗುಂದಿಯ ಪೂರ್ವದಿಕ್ಕಿಗೆ ಸುಮಾರು ೮ಕಿ.ಮೀ. ದೂರದಲ್ಲಿರುವ ಊರು ಮೋರಿಗೆರೆ.

[೧೨]ಮೋರಿಗೆರೆ ಗ್ರಾಮದ ಉದ್ದಿ ಬಸವಣ್ಣನ ಗುಡಿಯಲ್ಲಿರುವ ಕ್ರಿ.ಶ.೧೦೪೫ಕ್ಕೆ ಸೇರಿದ ಶಾಸನದಲ್ಲಿ ಪ್ರಥಮವಾಗಿ ಹೊಳಗುಂದಿ – ಹೆಸರಿನ ಉಲ್ಲೇಖ ದೊರೆಯುತ್ತದೆ. ಚಾಳುಕ್ಯ ತ್ರೈಲೋಕ್ಯಮಲ್ಲ ಅಹಮಲ್ಲದೇವನು ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ, ಸಾಮಂತನಾದ ನೊಳಂಬ ಘಟೆಯಂತಾಕಾರನ ಮಗ ಉದಯಾದಿತ್ಯ. ಇವನ ಮಗ ಜಗದೇಕ ಮಲ್ಲ, ಇರ್ಮಡಿನೊಳಂಬ ಪಲ್ಲವ ಪೆರ್ಮಾಡಿಯು. ಬಲ್ಲಕುಂದೆ-೩೦೦, ಕೋಗಳಿ-೫೦೦, ಕದಂಬಗಳಿಗೆ-೧೦೦೦, ಕುದಿ ಹರವಿ-೭೦, ಕರಿವಿಡಿ-೨೦ ಮತ್ತು ನೊಳಂಬವಾಡಿ-೩೨೦೦, ಆಳುತ್ತಿರಲು, ದಂಡನಾಯಕ ಶ್ರೀ ಮುದ್ದಣ್ಣ ನಾಯಕ, ತಿರಣ್ಣ ಪ್ರಮುಖವಾಗಿ ಲೆಂಕಸಾಸಿರ್ವರು, ಅರ್ಮಳೆ, ನೆಲ್ಲಿಕುದಿರು, ಸೊನ್ನ, ಪೊಳಲ್ಗುಂದೆ, ಸೂಗೂರು, ಮೋರಿಗರೆ ಮೊದಲಾದ ಆರು ಗ್ರಾಮಗಳನ್ನು ಆಳುತ್ತಿರಲು ಎಂದು ಶಾಸನ ಮುಂದುರಿಯುತ್ತದೆ. ಇದರಿಂದ ತಿಳಿದುಬರುತ್ತದೆ. ಮೋರಗೆರೆ ಪರಿಸರದಲ್ಲಿ ಹೊಳಗುಂದಿ ಇತ್ತು ಎನ್ನುವುದು ಈ ಶಾಸನದ ಉಲ್ಲೇಖ.

ಈ ಆರು ಊರುಗಳಲ್ಲಿ 'ಅರ್ಮಳೆ'ಯು ಈಗಿನ ಅಂಬಳಿಯಾಗಿದೆ. ನೆಲ್ಲಿಕುದಿರು, ಸೊನ್ನ, ಮೋರಿಗೆರೆಗಳು ಸ್ವಲ್ಪ ಮಾತ್ರ ಬದಲಾವಣೆಯಾಗಿವೆ. 'ಸೂಗೂರು'ಮಾತ್ರ ಸುತ್ತಲಿನ ಪ್ರದೇಶದಲ್ಲಿ ಕಂಡುಬರುವುದಿಲ್ಲ. ಅಥವಾ ಗುರುತಿಸಲಾರದಷ್ಟು

ಬದಲಾವಣೆಯಾಗಿರಬಹುದು. ಪೊಳಲ್ಗುಂದೆ ಅರ್ಥವತ್ತಾಗಿ ನಾಮಕರಣಗೊಂಡಿದೆ. ಪೊಳಲ್+ಗುಂದೆ ಎಂದು ಬಿಡಿಸಿದಾಗ ಹಳಗನ್ನಡದಲ್ಲಿರುವ 'ಪ'ಕಾರಕ್ಕೆ ಹೊಸಗನ್ನಡದಲ್ಲಿ 'ಹ'ಕಾರವಾಗಿ ಪರಿವರ್ತನೆಗೊಂಡಿರುವುದು ಸಹಜ, ಪೊಳಲ್ = ಹೊಳಲ್ ಅಂದರೆ, ಪಟ್ಟಣ, ಗುಂದೆ ಎಂದರೆ ಬೆಟ್ಟ ಅಥವಾ ಎತ್ತರವಾಗಿರುವ ಪ್ರದೇಶ. 'ಪೊಳಲ್ಗುಂದೆ' ಎಂದರೆ ಬೆಟ್ಟದೊಂದಿಗೆ ಅಥವಾ ಪಕ್ಕದಲ್ಲಿ ಸ್ಥಾಪಿಸಲ್ಪಟ್ಟ ಪಟ್ಟಣ. 'ಹೊಳಗುಂದಿ'ಯ ಪಶ್ಚಿಮಕ್ಕೆ ಬೆಟ್ಟವಿದೆ. ಬೆಟ್ಟಗಳ ಪಕ್ಕದಲ್ಲಿ ಸ್ಥಾಪಿಸಲ್ಪಟ್ಟಿರುವ ಗ್ರಾಮಗಳಿಗೆ, ಗುಂದೆ, ಗುಂದ, ಕುಂದ, ಗುಂದಿ ಎಂದೂ ಕೊನೆಯಲ್ಲಿ ಬರುವ ಎಷ್ಟೋ ಊರುಗಳು ಕನ್ನಡನಾಡಿನಲ್ಲಿವೆ.

### ಗದ್ದಿಕೇರಿ

ಮೋರಗೇರಿ ಗ್ರಾಮದಿಂದ ಸು.೮ ಕಿ.ಮೀ. ದೂರದಲ್ಲಿರುವ ಗ್ರಾಮ ಗದ್ದಿಕೇರಿ. ಈ ಗ್ರಾಮವು ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಕ್ರಿ.ಶ. ೧೫ನೇಶತಮಾದಲ್ಲಿ ಈ ಗ್ರಾಮವು ಉದಯವಾಗಿರಬಹುದೆಂದು ಊಹಿಸಲಾಗಿದೆ. ಪ್ರಮುಖವಾಗಿ ಇಲ್ಲಿನ ದೇವಾಲಯಗಳು, ಹಾಗೂ ವೀರಗಲ್ಲುಗಳು ಅದರ ಹಿನ್ನಲೆಯನ್ನು ತಿಳಿಸುತ್ತವೆ. ಮೊದಲು ಕೆಲವು ಕುಟುಂಬಗಳು ಮಾತ್ರ ಇಲ್ಲಿ ನೆಲೆಸಿದ್ದವು. ನಂತರ ಕುಟುಂಬಗಳು ಬೆಳೆದು ಹಾಗೂ ವಲಸೆ ಬಂದ ಜನರು ನೆಲೆಸಿ ಇಂದು ಒಂದು ಗ್ರಾಮವಾಗಿ ರೂಪವಾಗಿದೆ. ಈ ಗ್ರಾಮಕ್ಕೆ ಗದ್ದಿಕೇರೆ ಎಂದು ಹೆಸರು ಬರಲು ಕಾರಣವೇನೆಂದರೆ ಗ್ರಾಮದ ಪಕ್ಕದಲ್ಲಿ ಒಂದು ಕೆರೆ ಇತ್ತು ಆ ಕೆರೆ ಇವರ ಜೀವನೋಪಾಯಕ್ಕೆ ಹಾಗೂ ಕೃಷಿ ಕೆಲಸಗಳಿಗೆ ತುಂಬಾ ಸಹಕಾರಿಯಾಗಿತ್ತು. ಅಂದು ಪ್ರಮುಖವಾಗಿ ಭತ್ತದ ಗದ್ದೆಗಳಿಗೆ ಮತ್ತು ಕಬ್ಬಿನ ಗದ್ದೆಗಳಿಗೆ  ನೀರನ್ನು ಬಿಡುತ್ತಿದ್ದರು. ಆದ್ದರಿಂದ ಈ ಗ್ರಾಮಕ್ಕೆ 'ಗದ್ದೆಯ ಕೆರೆ' ಎಂಬ ಹೆಸರು ಬಂದಿತೆಂದು ಹಿರಿಯ ನಾಗರಿಕರು ಹೇಳುತ್ತಾರೆ ಹಾಗೂ ಮೊದಲು 'ಗದ್ದೆಯ ಕೆರೆ' ಎಂದು ಇದ್ದದ್ದು ನಂತರ ಆಡು ಭಾಷೆಗೆ ಸುಲಭವಾಗಿ "ಗದ್ದಿಕೆರೆ' ಎಂಬ ಹೆಸರು ಬಂದಿರಬೇಕು ಹಾಗೂ ಈ ಗ್ರಾಮಕ್ಕೆ "ಗದ್ದಿಕೆರೆ ಮತ್ತು ಗದ್ದಿಕೇರಿ" ಎಂಬ ಹೆಸರುಗಳು ಇಂದು ಪ್ರಚಲಿತದಲ್ಲಿವೆ. ಈ ಎರಡು ಹೆಸರಿನ ಯಾವೂದಾದರು ಒಂದು ಹೆಸರಿನಿಂದ ಕರೆಯಬಹುದು.

### ಇಟ್ಟಗಿ

ಮೋರಿಗೆರೆಯಿಂದ ದಕ್ಷಿಣಕ್ಕಿರುವ ಇಟ್ಟಗಿಯು ಸುಮಾರು ೧೨ಕಿ.ಮೀ ದೂರದಲ್ಲಿದೆ ಇಟ್ಟಗಿಗೆ ಜನರ ಅಡುಮಾತಿನಂತೆ ಹೇಳಬೇಕಾದರೆ ಇಲ್ಲಿ ಇಟ್ಟಿಗೆಗಳನ್ನು ತಯಾರಿಸುತ್ತಿದ್ದರು ಆದ್ದರಿಂದ ಈ ಊರಿಗೆ ಇಟ್ಟಗಿ ಎಂಬ ಹೆಸರು ಪ್ರಾಪ್ತವಾಯಿತ್ತು. ಇಟ್ಟಿಗೆ ಗ್ರಾಮದಲ್ಲಿ ಮೊದಲು ಹಳೇ ಇಟ್ಟಗಿ ಕೋಟೆಯೊಳಗೆ ಇದೆ. ಈಗ ಹೊಸ ಊರಾಗಿ ಇಟ್ಟಗಿ ಹರಪನಹಳ್ಳಿ ರಸ್ತೆ, ಹಡಗಲಿ ರಸ್ತೆ, ಹಗರಿಬೊಮ್ಮನಹಳ್ಳಿ ರಸ್ತೆಯಕಡೆ ಊರು ವಿಸ್ತಾರವಾಗಿದೆ. ಇದು ಕೂಡ ಮೋರಿಗೆರೆ ಪರಿಸರದಲ್ಲಿತ್ತು ಎನ್ನುವುದು ಉಲ್ಲೇಖ.

### ನೈಷ್ಠಿಕ ಸ್ಥಾನಗಳು

ಮೋರಗೆರೆ ಪ್ರಾಚೀನ ಕಾಲದಲ್ಲಿ ಬ್ರಹ್ಮಚರ್ಯಕ್ಕೆ ಬಹಳ ಪ್ರಾಮುಖ್ಯತೆ ಇತ್ತು. ಅದರಲ್ಲೂ ಧರ್ಮಗುರುಗಳೆನಿಸಿಕೊಂಡವರು ತಮ್ಮ ಬ್ರಹ್ಮಚರ್ಯವನ್ನು ಕಾಯ್ದುಕೊಂಡು ಬರಬೇಕು. ಜೈನ, ಶೈವ, ಮಠಗಳ ಗುರುಗಳೆಲ್ಲರೂ ಆಜನ್ಮ ಬ್ರಹ್ಮಚಾರಿಗಳಾಗಿರುತ್ತಿದ್ದರು. ಗುರುಗಳು ಬ್ರಹ್ಮಚಾರ್ಯ ಪಾಲಿಸಬೇಕೆಂದು ಶಾಸನಗಳು ಒತ್ತಿ ಹೇಳಿವೆ. ಮೇಲ್ಕಾಣಿಸಿದ ಲಾಕುಳ ಶೈವ ಮಠಗಳೆಲ್ಲವು ನೈಷ್ಠಿಕ ಸ್ಥಾನಗಳಾಗಿದ್ದವು. ಇದರಲ್ಲಿರುವ ವಿದ್ಯಾರ್ಥಿಗಳು, ತಪೋಧನರು ನೈಷ್ಠಿಕರಾಗಿರಬೇಕು. ನೈಷ್ಠಿಕರಲ್ಲದವರನ್ನು ಮಠ ಬಿಟ್ಟು ಹೊರಗೆ ಹಾಕಬೇಕೆಂದು ಶಾಸನಗಳು ಹೇಳುತ್ತವೆ. ಮೋರಗೇರಿಯ ಶಾಸನದಲ್ಲಿ[೧೩] ಇದು ನೈಷ್ಠಿಕ ಸ್ಥಾನಮಿಲ್ಲಿ ನೈಷ್ಠಿಕರಲ್ಲದ ತಪೋಧನಮಿರಲಾಗದು. ಬ್ರಹ್ಮಚಾರ್ಯದಿಂ ಕೆಟ್ಟು ನಡೆವ ತಪೋಧನರಂ ನಾಡ ನಾಳ್ವರಸುಂ ಮನೆಯನ್ನು ಮೋರಿಂಗೆರೆಯ ಪನ್ನಿರ್ವರೂರೋಡೆಯರುಮಿರ್ದು ಪೊರವಡಿಸಿಯವರ ಸಂತತಿಯ ನೈಷ್ಠಿಕರನಿರಿಸುವರಿದನುಪೇಕ್ಷಗೆಯ್ದು ವಗ್ಗಿ್ೀಧರ್ಮನುಳಿದ ದೊಷಮಕ್ಕು ಆಚಾರಗೆಟ್ಟು ಪೋಗದೆ ಮೊಣ್ಣಿಯ ತನಂಗೆಯ್ದು ನಡೆದಂ ಶ್ವಾನಗಾರ್ಧಭ ಚಣ್ಡಾಳನಾತಂ ಸತ್ತಡೆ ಪನ್ದಿ ಸತ್ತದು ಎಂದು ನಾಯ್ಸತ್ತದು' ಎಂದು ಬರುತ್ತದೆ. ಅಂದರೆ ಬ್ರಹ್ಮಚರ್ಯಯುರು ಸೇರಿ ಮಠದಿಂದ ಹೊರಗೆ ಹಾಕಿ ಅವರ ಸಂತತಿಯು ನೈಷ್ಠಿಕರಾಗಿದ್ದವರನ್ನು ಆ ಮಠಕ್ಕೆ ನೇಮಿಸಬೇಕು. ಇದನ್ನು ಉಪೇಕ್ಷೆಮಾಡಿ ಸುಮ್ಮನಿದ್ದವರಿಗೆ ಧರ್ಮವನ್ನು ಆಳಿದ ಪಾಪ ಬರುತ್ತದೆ. ಆಚಾರಗೆಟ್ಟು ಹೊರಗೆ ಹೋಗಲಾರದೆ ಅವನು ಸತ್ತರೆ, ನಾಯಿ, ಹಂದಿ ಸತ್ತ ಹಾಗೆಂದು ಭಾವಿಸಬೇಕು. ನೈಷ್ಠಿಕಕ್ಕೆ ಪ್ರಾಚೀನರು ವಿಶೇಷ ಗಮನಕೊಟ್ಟಿದ್ದರು.

### ಮೋರಗೆರೆ ವಿದ್ಯಾಕೇಂದ್ರವಾಗಿ

ಕ್ರಿಸ್ತಶಕದ ಆರಂಭಲ್ಲಿ ಕಟ್ಟಿದ ದೇವಾಲಯಗಳು ಕರ್ನಾಟಕದಲ್ಲಿ ಉಳಿದಿಲ್ಲವಾದರೂ ಅವುಗಳಿಗೆ ರಾಜರು ದತ್ತಿ ಬಿಟ್ಟಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. 'ಅಶೋಕನ ಕಾಲದಲ್ಲಿ ಬೌದ್ಧ ವಿಹಾರಗಳು, ದೊಡ್ಡ ಸಂಸ್ಥೆಯಾಗಿ ಬೆಳೆದು ವಿದ್ಯಾ ಕೇಂದ್ರಗಳಾದವು. ಪ್ರಾರಂಭದಲ್ಲಿ ಇವು ಭಿಕ್ಷುಗಳ ಶಿಕ್ಷಣಕ್ಕೆ ಮೀಸಲಾಗಿದ್ದರು, ಕ್ರಮೇಣ ಉಳಿದವರನ್ನು ಸಹ ಸೇರಿಸಿಕೊಳ್ಳುತ್ತಿದ್ದಿರಬೇಕು. ಬೌದ್ಧ ವಿಹಾರಗಳು ವಿದ್ಯಾಸಂಸ್ಥೆಗಳಾಗಿ ಬದಲಾವಣೆಯಾದದ್ದು ಹಿಂದೂಗಳು ತಮ್ಮ ವಿದ್ಯಾ ಸಂಸ್ಥೆಗಳ ಸ್ಥಾಪನೆಗೆ ಪ್ರೇರಣೆಯಾಗಿರಬೇಕು ಎಂದು ಡಾ॥ಅಲ್ತೇಕರ್ ಅವರು ಹೇಳಿದ್ದಾರೆ.[೧೪]

ದೇವಸ್ಥಾನಗಳು ಯತಿಗಳಿಗೆ, ಛಾತ್ರರಿಗೆ ವಾಸಸ್ಥಾನವಾಗಿ ಅಸ್ತಿತ್ವದಲ್ಲಿದ್ದರು, ವಿದ್ಯಾಸಂಸ್ಥೆಗಳಾಗಿ ಅಸ್ತಿತ್ವಕ್ಕೆ ಬಂದದ್ದು ೯ನೆಯ ಶತಮಾನದ ನಂತರ, ದೇವಾಲಯಗಳಿಗೆ ವ್ಯವಸ್ಥಿತ ವಿದ್ಯಾಕೇಂದ್ರಗಳ ಸ್ಥಾನಕೊಟ್ಟವರು ಕಾಳಮುಖ ಪಾಶುಪತ ಶೈವರು, ಇವರು ಕರ್ನಾಟಕದ ದೇವಾಲಯಗಳ ಸ್ಥಾನಪತಿಯಾಗಿದ್ದು, ನಾಡಿನ ತುಂಬಾ ಚಿಕ್ಕ ಪುಟ್ಟ

ಹಾಗೂ ದೊಡ್ಡ ಮಠಗಳನ್ನು, ಶೈವ ದೇವಾಲಯಗಳನ್ನು ಸ್ಥಾಪಿಸಿದರು. ದೇವಾಲಯಗಳಲ್ಲಿ ನಡೆಯುತ್ತಿದ್ದ ಪೂಜೆ ಪುನಸ್ಕಾರಗಳ ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳನ್ನು, ಶಿಕ್ಷಣವನ್ನು ತಮ್ಮ ಕಾರ್ಯವ್ಯಾಪ್ತಿಯಲ್ಲಿ ಅಳವಡಿಸಿಕೊಂಡರು.

ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳು ಶೈವಯತಿಗಳ ವಾಸಸ್ಥಾನವು ಆಗಿತ್ತು. ದೇವಾಲಯಗಳಲ್ಲಿ ನೆಲೆನಿಂತ ಈ ಯತಿಗಳು ಮಹಾ ವಿದ್ವಾಂಸರು ಮಾತ್ರವಲ್ಲದೆ, ಜಪತಪಗಳ ಜೊತೆಯಲ್ಲಿ ವಿದ್ಯಾದಾನವನ್ನು ಮಾಡುತ್ತಿದ್ದರು. ರಾಜರು, ಮಂತ್ರಿಗಳು, ಮಾಂಡಲೀಕರು, ದಂಡನಾಯಕರು, ಭಕ್ತರು ದೇವಾಲಯಗಳಲ್ಲಿ ನಡೆಯುವ ಪೂಜೆ ಮತ್ತು ಅಲ್ಲಿಯ ಎಲ್ಲಾ ಕಾರ್ಯ ಕಲಾಪಗಳಿಗಾಗಿ ದಾನದತ್ತಿ ಬಿಡುತ್ತಿದ್ದಂತೆ, ವಿದ್ಯಾಭ್ಯಾಸಕ್ಕಾಗಿಯೂ ದತ್ತಿಗಳನ್ನು ಕೊಡಲು ಪ್ರಾರಂಭಿಸಿದರು. ಹೀಗೆ ದೇವಾಲಯಗಳು ವಿದ್ಯಾ ಕೇಂದ್ರಗಳಾಗಿ ಪರಿವರ್ತನೆಯಾದವು.

ಹೀಗೆ ಪ್ರಾರಂಭವಾದ ವಿದ್ಯಾಭ್ಯಾಸವನ್ನು ಅಗ್ರಹಾರ, ಮಠ, ದೇವಸ್ಥಾನ ಮತ್ತು ಘಟಿಕಸ್ಥಾನಗಳಲ್ಲಿ ಮುಂದುವರಿಸಲಾಯಿತು. ವಿದ್ಯಾ ಕೇಂದ್ರಗಳಿಗೆ ಘಟಿಕಾಸ್ಥಾನಗಳೆಂದು ಹೆಸರು ಬರಲು ಸರಿಯಾದ ಕಾರಣ ತಿಳಿಯದು. ಸಂಸ್ಕೃತದಲ್ಲಿ 'ಘಟಿಕಾ' ಎಂದರೆ ಮಣ್ಣಿನ ಮಡಿಕೆ. ಕಾಲವನ್ನು ಎಣಿಸಲು ಇದನ್ನು ಬಳಸುತ್ತಿದ್ದರು. ವೈದಿಕಕಾಲದ ಬ್ರಾಹ್ಮಣರಿಗೆ, ವಿದ್ಯಾಕೇಂದ್ರಗಳಾಗಿದ್ದ ದೇವಸ್ಥಾನಗಳಿಗೆ, ಜೋತಿಷ್ಯರಿಗೆ, ಈ ಘಟಿಕಾಯಂತ್ರಗಳು ಅವಶ್ಯವಾಗಿ ಬೇಕಾಗಿರುತ್ತಿತ್ತು. ಪ್ರಾಚೀನ ಕಾಲದಲ್ಲಿ ಯತಿಗಳ ಮುಖಾಂತರ ಧಾರ್ಮಿಕ ಸಾಹಿತ್ಯದಲ್ಲಿ ಅತ್ಯುತ್ತಮ ಜ್ಞಾನವನ್ನು ಪಡೆಯಲು ಶ್ರೇಷ್ಠವಾದ ಸಂಸ್ಥೆಯೇ ಘಟಿಕಾ ಸ್ಥಾನ ಎಂದು ಹೇಳಿದ್ದಾರೆ. ಇಂದಿನ ವಿದ್ಯಾರ್ಥಿಗಳು ಉನ್ನತ ವ್ಯಾಸಂಗ ಪಡೆಯಲು ವಿಶ್ವವಿದ್ಯಾಲಯಗಳಿಗೆ ಹೋಗುತ್ತಿರುವಂತೆ ಪ್ರಾಚೀನಕಾಲದಲ್ಲಿ ಘಟಿಕಾ ಸ್ಥಾನಗಳಿಗೆ ಹೋಗುತ್ತಿದ್ದರು.

ಮೋರಗೆರೆಯಲ್ಲಿ ವಿದ್ಯಾಸಂಸ್ಥೆಗಳು ಕಂಡುಬರುತ್ತವೆ. ಪ್ರಾಚೀನ ಕಾಲದಲ್ಲಿ ದೇವಾಲಯಗಳು ಹಾಗೂ ಅವುಗಳಿಗೆ ಹೊಂದಿಕೊಂಡಿದ್ದ ಮಠಗಳು, ಜೈನ ಬಸದಿಗಳು ವಿದ್ಯಾ ಸಂಸ್ಥೆಗಳಾಗಿದ್ದವು. ಅವುಗಳಲ್ಲಿ 'ಮೋರಿಂಗೆರೆ'(ಮೋರಗೇರಿ)ಒಂದು ಘಟಿಕಾ ಸ್ಥಾನವಾಗಿತ್ತು. ಅಲ್ಲಿಯ ಮಠಕ್ಕೆ ದಾನ ಬಿಡುವಾಗ 'ಮಠದ ವಿದ್ಯಾದಾನಕ್ಕೆ' ಘಳಿಗೆ ಮಾಣಿಗಳ್ವರ್ಗ'ದಾನ ಬಿಟ್ಟಿದುದನ್ನು ಶಾಸನ ತಿಳಿಸುತ್ತದೆ. ಹಿಂದೆ ಘಟಿಕಾ ಸ್ಥಾನಗಳು ಉನ್ನತ ಶಿಕ್ಷಣದ ಕೇಂದ್ರಗಳಾಗಿದ್ದವು. ಮೋರಗೆರೆಯುಕೂಡಾ ವಿದ್ಯಾಕೇಂದ್ರವಾಗಿತ್ತು ಎಂದು ತಿಳಿದುಬರುತ್ತದೆ.

# ಅಡಿ ಟಿಪ್ಪಣಿಗಳು.

೧. ಡಾ.ಜೆ.ಎಂ.ನಾಗಯ್ಯ. ಬಳ್ಳಾರಿ ಜಿಲ್ಲೆಯ ಶಾಸನಗಳು ೨೦೦೦, ಪು.ಸಂ-೪೯

೨. ಅದೇ- ೨೦೦೦, ಪು.ಸಂ. ೩೪-೩೫

೩. ಡಾ.ಜೆ.ಎಂ. ನಾಗಯ್ಯ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ೨೦೦೨ ಪು.ಸಂ.೧೭೫-೧೭೬

೪. ಎಂ. ಧೃವನಾರಯಣ. ನಾರಯಣದೇವರ ಕೆರೆ.....ಪು.ಸಂ. ೯-೧೦

೫. ಪರಮೇಶ್ವರಯ್ಯ ಸೊಪ್ಪಿನಮಠ. ಹಗರಿಬೊಮ್ಮನಹಳ್ಳಿ ತಾಲೂಕು ದರ್ಶನ೨೦೦೫. ಪು.ಸಂ.೧-೫

೬. ಡಾ.ಕೊಟ್ರೇಶ್ ಎಂ. ಮತ್ತು ಇತರರು, ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ ೧೯೯೯ ಹಗರಿಬೊಮ್ಮನಹಳ್ಳಿ-ಪು.ಸಂ೩೮-೨೮೭

೭. ಅದೇ-ಪು.ಸಂ ೩೯-೨೮೭-೮೮

೮. ಡಾ.ಜೆ.ಎಂ. ನಾಗಯ್ಯ ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ೨೦೦೨ ಪು.ಸಂ.೧೩-೧೪

೯. ಅದೇ- ೨೦೦೨ ಪು.ಸಂ.೧೪

೧೦. ಡಾ.ಜೆ.ಎಂ. ನಾಗಯ್ಯ. ಬಳ್ಳಾರಿ ಜಿಲ್ಲೆಯ ಶಾಸನಗಳು ೨೦೦೦ ಪು.ಸಂ.೧೪

೧೧. ಕೆ.ಎಂ.ಶಿವಲಿಂಗಯ್ಯ ಇತಿಹಾಸ ದರ್ಶನ- ಪು.ಸಂ.೨೦೦

೧೨. ಅದೇ- ಪು.ಸಂ೨೦೦

೧೩. ಡಾ.ಜೆ.ಎಂ. ನಾಗಯ್ಯ. ಬಳ್ಳಾರಿ ಜಿಲ್ಲೆಯ ಶಾಸನಗಳು೨೦೦೦- ಪು.ಸಂ.೫೫

೧೪. ಜಯಮ್ ಎಚ್. ನೊಳಂಬರ ಇತಿಹಾಸಗಳ ಸಾಂಸ್ಕೃತಿಕ ಅಧ್ಯಯನ ೨೦೦೨ ಪು.೧೬೩

## ೨.೨ ಸ್ಥಳ ಪರಿಚಯ

ಮೋರಗೆರೆಯು ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿದ್ದು, ಪುರಾತನ ಕಾಲದಿಂದಲೂ ಸಾಂಸ್ಕೃತಿಕವಾಗಿ ತನ್ನದೇ ವಿಶೇಷತೆಯನ್ನು ಗುರುತಿಸಿಕೊಂಡಿದೆ. ಮೋರಗೆರಿಯು ಹಗರಿಬೊಮ್ಮನಹಳ್ಳಿಯಿಂದ ಸುಮಾರು ೧೫.ಕಿ.ಮೀ. ದೂರದಲ್ಲಿದೆ. ಬಳ್ಳಾರಿಯಿಂದಲೂ ಇದು ೧೧೫ ಕಿ.ಮೀ. ಅಂತರದಲ್ಲಿಂಯೇ ಇದೆ, ಹಗರಿಬೊಮ್ಮನಹಳ್ಳಿಯಿಂದ ಮೋರಿಗೆರೆ ಹೋಗುವ ರಸ್ತೆಯು ಬಹಳ ಚೆನ್ನಾಗಿದೆ. ಇತ್ತೀಚೆಗೆ ಗ್ರಾಮೀಣ ಭಾಗದಲ್ಲಿರುವ ರಸ್ತೆಗಳು ಹದಗೆಟ್ಟಿಲ್ಲ ಕಾರಣ ದಟ್ಟ ಸಂಚಾರವಿಲ್ಲ. ಹಡಗಲಿಗೆ ಹೋಗಲು ಸೊನ್ನ, ಮೋರಿಗೆರೆ ಮುಖಾಂತರ ಹೋಗಬಹುದು. ಮೋರಿಗೆರೆ ಪರಿಸರವು ಬಯಲು ಪ್ರದೇಶದಿಂದ ಕೂಡಿದೆ.

ಹಗರಿಬೊಮ್ಮನಹಳ್ಳಿ ಮತ್ತು ಮೋರಗೆರೆ ಮಾರ್ಗಮಧ್ಯದಲ್ಲಿ ಸಕ್ರಿಹಳ್ಳಿ ಕ್ರಾಸ್, ನಂತರ ಸೊನ್ನ ಇದೆ. ಹಗರಿಬೊಮ್ಮನಹಳಿಯಿಂದ ಮೋರಿಗೆರೆ ಹೋಗುವ ಮಾರ್ಗ ಮಧ್ಯದಲ್ಲಿ ಸಕ್ರಿಹಳ್ಳಿ ಕ್ರಾಸ್, ನಂತರ ಸೊನ್ನ ಇದೆ. ಹಗರಿಬೊಮ್ಮನಹಳ್ಳಿಯಿಮದ ಮೋರಿಗೆರೆ ಹೋಗುವ ಮಾರ್ಗದಲ್ಲಿ ಅಲ್ಲಲ್ಲಿ ನೀರಾವರಿ ಸೌಲಭ್ಯಗಳುಳ್ಳ ಜಮೀನುಗಳು ಇರುವುದರಿಂದ ಭತ್ತ, ಕಬ್ಬು, ಬೆಳೆಗಳನ್ನು ಬೆಳೆಯುತ್ತಾರೆ. ಜೊತೆಗೆ ನೀರಾವರಿ ಸೌಕರ್ಯವಿರುವುದರಿಂದ ಒಂದಕ್ಕಿಂತ ಹೆಚ್ಚು ಬೆಳೆ ಬೆಳೆಯಲು ಅನಕೂಲವಾಗಿದೆ. ನಂತರ ಸೊನ್ನದಲ್ಲಿ ಕೂಡಾ ಹೆಚ್ಚಿನ ನೀರಾವರಿ ಸೌಲಭ್ಯ ಹೊಂದಿಲ್ಲ. ಇಲ್ಲಿ ಹೆಚ್ಚಾಗಿ ಮಳೆಯನ್ನು ನಂಬಿಕೊಂಡಿದೆ. ಸೊನ್ನದಿಂದ ಮೋರಗೆರೆ ಹೋಗುವ ಮಾರ್ಗದಲ್ಲಿ ಈ ಎರಡು ಊರಿನ ಜಮೀನುಗಳು ಒಂದಕ್ಕೊಂದು ಕೂಡಿರುವುದರಿಂದ ಈ ಎರಡು ಊರುಗಳನ್ನು 'ಅವಳಿ'ಗಳು ಎಂದು ಕರೆಯುತ್ತಾರೆ. ಮೋರಗೆರೆಯ ಪ್ರವೇಶ ದ್ವಾರದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿಯ ಉಪಸ್ಟೇಷನ್ ಇದೆ. ಇದಾದ ಮೇಲೆ ಸ್ವಲ್ಪ ಅಂತರದಲ್ಲಿ ಗ್ರಾಮ ಇದೆ, ರಾಜಕೀಯ ಕ್ಷೇತ್ರದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿರುವ ಗ್ರಾಮಗಳಲ್ಲಿ ಮುಂಚುಣಿಯಲ್ಲಿರುವ ಗ್ರಾಮ ಮೋರಗೇರಿ. ಮೋರಗೆರಿಯ ವಿವಿಧ ವ್ಯವಸ್ಥೆಗಳ ಮಧ್ಯೆ ಇರುವುದು ತಿಳಿದು ಬರುತ್ತದೆ. ಮೋರಗೆರಿ ಗ್ರಾಮವು ಸರಕಾರದಿಂದ ಬರುವ ಎಲ್ಲಾ ಸೌಲಭ್ಯಗಳನ್ನು ಹೆಚ್ಚು-ಕಡಿಮೆ ಪಡೆದುಕೊಂಡಿರುವ ಗ್ರಾಮ, ಜೊತೆಗೆ ಹೆಚ್ಚು ಜನ ಸಂದಣಿಯಿಂದ ಕೂಡಿರುವ ಗ್ರಾಮ.

ಮೋರಗೆರಿಯ ಪಶ್ಚಿಮ ದಿಕ್ಕಿಗೆ ಹೊಳಗುಂದಿ ಎಂಬ ಗ್ರಾಮ ಇದೆ. ಇವೆರಡರ ಅಂತರ ೮ ಕಿ.ಮೀ. ಇದೆ. ಹೊಳಗುಂದಿ ಗ್ರಾಮವು ನೀರಾವರಿ ಸೌಲಭ್ಯಗಳನ್ನು ಹೊಂದಿರುವ ಪ್ರದೇಶ. ಈ ಭಾಗದಲ್ಲಿಯೂ ನೀರಾವರಿ ಬೆಳೆಗಳನ್ನು ಒಂದಕ್ಕಿಂತ ಹೆಚ್ಚು ಬೆಳೆಗಳನ್ನು ವರ್ಷಕ್ಕೆ ಬೆಳೆಯುತ್ತಾರೆ. ಹೊಳಗುಂದಿಯಲ್ಲಿ ಪ್ರಸಿದ್ಧವಾದ ಐತಿಹಾಸಿಕ ದೇವಾಲಯಗಳು ಇವೆ. ಹೊಳಗುಂದಿಯ ಶಾಸನ[೧] ದಲ್ಲಿ ಕ್ರಿ.ಶ. ೨೩-೦೯-೧೦೯೭ಕ್ಕೆ ಸೇರಿದ ಬಾಳೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಶಾಸನದಲ್ಲಿ "ತುಂಗಭದ್ರ

ನದಿಂಯಿಂಕರಮೆಸೆವ ತೆಂಕದೆಸೆಯೊಳ್ ಹೇಳು..... ನಂದನ ಪ್ರಕರದಿಂ.......... ದಾಚಲ ಕೂಟಕ .......... ನಿಶುರಂಬದಿರಿ............ ಶ್ರಿತ ವಿಶ್ವಂಭರಯೋಳ್॥ ಸೊಗಯಿಸುತ ..... ಮೆಸೆದ 'ಪೊಳಲ್ಗನ್ದೆ'ಯೊಳು ರಾಜಿಸಿ"—— ಎಂದಿದೆ. ಮೋರಿಗೆರೆ ಶಾಸನದಲ್ಲಿ ಪೊಳಲ್ಗುಂದೆ' ಎಂದಿದ್ದದ್ದು ಬಾಳೇಶ್ವರ ಗುಡಿಯ ಶಾಸನದಲ್ಲಿ[೨] 'ಸಮಸ್ತ ಗುಣ ಸಂಪನ್ನಂ ನುಡಿದು ಮತ್ತೆನ್ನಂ ಗೋತ್ರಪವಿತ್ರ ಪರಾಂಗನಾ ಪುತ್ರಂ ನೀತಿ ಚಾಣಿಕ್ಯಂ ಸುಜನ ಮಾಣಿಕ್ಯಾಂಚಲ ದಂಕರಾಮಂ ಸಂಗ್ರಾಮಭೀಮಂ ಸಾಹ ಸೋತ್ತುಂಗನಯ್ಯನಸಿಂಗಂ' ಎಂದು ಬರುತ್ತದೆ. ಈ ಪಶ್ಚಿಮ ಪ್ರದೇಶದಲ್ಲಿ ಅನೇಕ ಮಣ್ಣಿನ ದಿಣ್ಣೆಗಳಿವೆ.

ಮೋರಗೆರೆ ಪೂರ್ವದಿಕ್ಕಿನಲ್ಲಿ ಸೊನ್ನ, ಮಾಲವಿ, ಚಿಂತರಪಳ್ಳಿ ಗ್ರಾಮಗಳಿವೆ. ಸೊನ್ನ ಈ ಪ್ರದೇಶವು ಮೋರಗೇರಿ ಪ್ರದೇಶವನ್ನು ಆಳ್ವಿಕೆ ಮಾಡಿದ ರಾಜಮನೆತನಗಳ ಆಧೀನದಲ್ಲಿತ್ತು. ಈ ಗ್ರಾಮದಲ್ಲಿ ನಾಣ್ಯಗಳನ್ನು ಟಂಕಿಸುವ ಟಂಕಶಾಲೆಗಳು ಇದ್ದವು ಎಂದು ತಿಳಿದು ಬರುತ್ತದೆ. ಸೊನ್ನದಲ್ಲಿ ಪ್ರಸಿದ್ಧ ದೇವಾಲಯವೆಂದರೆ ಈಶ್ವರ ದೇವಾಲಯ[೩] ಈಶ್ವರ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅಂದರೆ ಕ್ರಿ.ಶ.ಸು೧೨ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಪೂರ್ವಾಭಿಮುಖವಾಗಿರುವ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳಗಳಿವೆ. ಇದರ ಉಳಿದ ಭಾಗಗಳು ಹಾಳಾಗಿವೆ. ಗರ್ಭಗೃಹದಲ್ಲಿ ಶಿವಲಿಂಗ, ಅಂತರಾಳದಲ್ಲಿ ನಂದಿ ಶಿಲ್ಪಗಳಿವೆ. ಈ ದೇವಾಲಯುವನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ಗ್ರಾಮದ ಪಶ್ಚಿಮ ದಿಕ್ಕಿನಲ್ಲಿದೆ.

ಮೋರಗೇರಿ ಗ್ರಾಮದ ಸುತ್ತಲೂ ಫಲವತ್ತಾದ ಭೂಮಿ ಇದೆ. ಬಿಳಿ ಮರಳು ಮಿಶ್ರಿತ ಮಣ್ಣು ಕಂಡು ಬರುತ್ತದೆ. ಮೋರಗೆರೆಯ ಆಗ್ನೇಯ ಭಾಗಕ್ಕೆ ವಿಶಾಲವಾದ ಖುಷ್ಕಿ ಒಣ ಭೂಮಿಗಳು ಕಂಡು ಬರುತ್ತವೆ. ಇಲ್ಲಿ ಕಂಡುಬರುವ ಭೂಮಿಗಳು ಅಷ್ಟೇನು ಫಲವತ್ತತೆ ಹೊಂದಿರುವ ಭೂಮಿಗಳಲ್ಲ. ಮಳೆಯನ್ನಾಶ್ರಯಿಸಿರುವ ಭೂಮಿಗಳು ಇವೆ. ಮೋರಗೆರೆಯ ಮಧ್ಯ ಭಾಗದಲ್ಲಿ ರಸ್ತೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಮೋರಗೆರೆಯಲ್ಲಿ ದೊರೆತ ಶಾಸನದಲ್ಲಿ[೪] 'ಮೀರಂಗೇರಿ'ಎಂದು ಕ್ರಿ.ಶ.೧೦೪೫ರ ಅಕ್ಟೋಬರ್ ೨೪ರ ಶಾಸನ ತಿಳಿಸುತ್ತದೆ. ಇಲ್ಲಿ ೧೨ನೇ ಶತಮಾನಕ್ಕೆ ಸೇರಬಹುದಾದ ಶಾಸನಗಳು.[೫] ದೇವಾಲಯಗಳು ಕಂಡುಬರುವುದರಿಂದ ಪ್ರಾಚೀನ ಕಾಲಕ್ಕೆ ಸೇರಿದ್ದವು ಎಂಬುದನ್ನು ತಿಳಿದುಕೊಳ್ಳಬಹುದು. ಇಂದಿನ ಮೋರಿಗೆರಿಯ ಗ್ರಾಮದ ಮೂಲವು ಇದೇ ಆಗಿತ್ತೆಂದು ಕಲ್ಪಿಸಿಕೊಳ್ಳಲು ಅವಕಾಶವಿದೆ. ಈ ಪ್ರದೇಶದ ಹಿಂಬಾಗದಲ್ಲಿ 'ಅಗಸೆ' ಬಾಗಿಲು ಇದೆ. ಈ ಅಗಸೆ ಬಾಗಿಲು ಮುಖಾಂತರ ಈ ಗ್ರಾಮವನ್ನು ಪ್ರವೇಶಿಸಲು ಅವಕಾಶವಿದೆ. ಈ ಅಗಸಿ ಬಾಗಿಲು ಮುಖಾಂತರ ಪ್ರವೇಶ ಮಾಡಿದ ನಂತರ ಎಡಭಾಗದಲ್ಲಿ ಬ್ರಹ್ಮ(ಜಿನಾಲಯ) ದೇವಾಲಯವನ್ನು ನೋಡಬಹುದು. ಇಲ್ಲಿಂದ ಮುಂದಕ್ಕೆ ಹೋದರೆ ಇತ್ತೀಚಿನ ವೀರಭದ್ರೇಶ್ವರ ದೇವಾಲಯವಿದೆ. ಇದರ ಈಶಾನ್ಯ ದಿಕ್ಕಿನಲ್ಲಿ ಮರಡಿ ದುರ್ಗಾಂಬಿಕ

ದೇವಾಲಯ ಕಂಡು ಬರುತ್ತದೆ. ಈ ದೇವಾಲಯದಿಂದ ಸ್ವಲ್ಪ ದೂರ ಪಕ್ಕದಲ್ಲಿ ಹೋದರೆ ಇದರ ಮೂಲ ದೇವಾಲಯವು ಇದೆ. ಈಗ ವಿನಾಶದ ಅಂಚಿನಲ್ಲಿದೆ. ಅಲ್ಲಿಂದ ಪೂರ್ವದಿಕ್ಕಿಗೆ ಬಾವಿ ಬಸವೇಶ್ವರ ಗುಡಿ ಇದೆ. ಈ ದೇವಾಲಯದ ದಕ್ಷಿಣಕ್ಕೆ ಅರ್ಧ ಕಿ.ಮೀ ದೂರದಲ್ಲಿ. ಕಲ್ಲೇಶ್ವರನ ಗುಡಿ ಇದೆ. ಇಲ್ಲಿಂದ ಮುಂದೆ ಕಲ್ಗುಡಿ ಕಲ್ಲೇಶ್ವರ ದೇವಾಲಯ ಇದೆ. ಅಲ್ಲಿಂದ ಮುಂದೆ ರಾಮಲಿಂಗೇಶ್ವರ ದೇವಾಲಯವಿದ್ದು ಈ ದೇವಾಲಯದಿಂದ ಪೂರ್ವಕ್ಕೆ ಸು.೨೦೦ಮೀ. ಅಂತರದಲ್ಲಿ ಪ್ರಾಚೀನ ಕಾಲದ ಕಲ್ಯಾಣಿ ಚಾಲುಕ್ಯರ ಪ್ರಸಿದ್ಧವಾದ ಉದ್ಧಿ ಬಸವೇಶ್ವರ ದೇವಾಲಯವಿದ್ದು. ಈ ದೇವಾಲಯದಲ್ಲಿ ಈ ಶಾಸನಗಳು ಕಂಡುಬರುತ್ತವೆ.

ಈ ಭಾಗದಿಂದ ದಕ್ಷಿಣಕ್ಕೆ ಸು.೧೦೦ಮೀ. ದೂರದಲ್ಲಿ ಇಲ್ಲಿ ಪ್ರಾಚೀನವಾದ ದೇವಾಲಯವಿದೆ. ಈ ದೇವಾಲಯವನ್ನು "ಬ್ರಹ್ಮದೇವಾಲಯ"[೬] ಎಂದು ಕರೆಯುತ್ತಾರೆ. ಜೈನರ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವುದು ಇದರ ವೈಶಿಷ್ಟ್ಯ. ಈ ಪ್ರದೇಶದಿಂದ ಪಶ್ಚಿಮಕ್ಕೆ ಸು.೧೨೦ಮೀ. ದೂರದಲ್ಲಿ ಸುಂದರ ಕೆತ್ತನೆಯ ಆಂಜನೇಯ ದೇವಾಲಯವಿದೆ. ಈ ದೇವಾಲಯವು ಸುಮಾರು ೪ ಅಡಿ ಎತ್ತರದ ಜಗಲಿಯ ಮೇಲಿದೆ. ಇದರಲ್ಲಿ ತೆರೆದ ಸಭಾ ಮಂಟಪಗಳಿವೆ. ಗರ್ಭಗೃಹದಲ್ಲಿ ಆಂಜನೇಯನ ಉಬ್ಬು ಶಿಲ್ಪವಿದೆ. ಇದನ್ನು ಸ್ಥಳೀಯರು ಬಾಲಾಂಜನೇಯನೆಂದು ಕರೆಯುತ್ತಾರೆ.[೭]

ಮೋರಗೆರೆಯ ಗ್ರಾಮದಲ್ಲಿ ಸುಮಾರು ಪ್ರಾಚೀನ ಕಾಲದ ಐದು ಬಾವಿಗಳನ್ನು ಗುರುತಿಸಬಹುದು. ಆದರೆ ಮೊದಲು ಈ ಬಾವಿಗಳಲ್ಲಿ ಸಿಹಿ ನೀರು ಇರುತ್ತಿತ್ತು ಆದರೆ ಇಂದು ಮಾಯವಾಗಿದೆ. ಈಗ ಮೋರಗೆರೆಯಲ್ಲಿ ಸಿಹಿನೀರು ಸಿಗುವುದು. ಬಹಳ ಕಷ್ಟ ಉಪ್ಪು ನೀರು ಹೇರಳವಾಗಿ ದೊರೆಯುತ್ತದೆ. ಮೋರಗೆರೆಯಲ್ಲಿ ಇರುವ ದೇವಾಲಯಗಳಲ್ಲಿ ಜೈನ ತೀರ್ಥಂಕರನ ವಿಗ್ರಹವನ್ನೊಳಗೊಂಡ ದೇವಾಲಯವಿದೆ. ಇದಕ್ಕೆ ಬ್ರಹ್ಮ ಅಥವಾ ಜೀನ ದೇವಾಲಯವೆಂತಲೂ ಕರೆಯುತ್ತಾರೆ. ಬಹುಶಃ ಈ ಪ್ರದೇಶವನ್ನಾಳಿದವರಲ್ಲಿ ಜೈನ ಧರ್ಮ ಅವಲಂಬಿತ ದೊರೆಗಳು ಇರಬಹುದಾಗಿದೆ. ಇಲ್ಲಿಂದ ನೈರುತ್ಯಕ್ಕೆ ೫೦ ಅಡಿ ಅಂತರದಲ್ಲಿ ನೊಳಂಬೇಶ್ವರ[೮] ದೇವರ ದೇವಾಲಯವಿದೆ. ಇಂದು ಬಸವೇಶ್ವರ ದೇವಾಲಯವೆಂದು ಕರೆಯುತ್ತಾರೆ.

ಮೋರಗೆರೆಯ ದಕ್ಷಿಣಕ್ಕೆ ಗ್ರಾಮ ಪಂಚಾಯಿತಿಯ ಕಾರ್ಯಾಲಯವಿದೆ. ಅಲ್ಲಿಂದ ಸ್ವಲ್ಪ ನೈರುತ್ಯಕ್ಕೆ ಹೋದರೆ ಸಾರ್ವಜನಿಕ ಗ್ರಂಥಾಲಯವಿದೆ. ಅಲ್ಲಿಯೇ ಒಂದು ಸರಕಾರಿ ಪ್ರೌಢಶಾಲೆಯಿದೆ. ಜೊತೆಯಲ್ಲಿ ಸರಕಾರಿ ಪಿ.ಯು.ಕಾಲೇಜ್ ಇದೆ. ಉತ್ತರ ಭಾಗದಲ್ಲಿ ಎರಡು ಹಿರಿಯ ಪ್ರಾಥಾಮಿಕ ಶಾಲೆಗಳಿವೆ. ಪಶ್ಚಿಮ ಮತ್ತು ದಕ್ಷಿಣದಲ್ಲಿ ಎರಡು ಅಂಗನವಾಡಿ ಕೇಂದ್ರಗಳಿವೆ.

ಮೋರಿಗೆರೆಯಲ್ಲಿರುವ ಸುಮಾರು ೫೦೦೦ ರಿಂದ ೬೦೦೦ ಜನ ಇದ್ದಾರೆ. ಇಲ್ಲಿನ ಜನ ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಇನ್ನು ಉಳಿದ ಜನ ಸರಕಾರಿ

ನೌಕರಿಗಳನ್ನು ಕೆಲವರು ವರ್ತಕರಾಗಿ, ಹೊರ ಹೊಮ್ಮಿದ್ದಾರೆ. ಇಲ್ಲಿಯ ವಿದ್ಯಾರ್ಥಿಗಳು ಉನ್ನತ ವ್ಯಾಸಾಂಗಕ್ಕಾಗಿ ಹಡಗಲಿ- ಹಗರಿಬೊಮ್ಮನಹಳ್ಳಿಗೆ ಹೋಗುತ್ತಾರೆ. ಇಲ್ಲಿ ಅನೇಕ ಜಾತಿ ಪದ್ಧತಿಗಳಿವೆ. ಇಲ್ಲಿಯ ಜನರು ನಾಗರೀಕತೆ ಬೆಳೆದಂತೆ ಸುಸಂಸ್ಕೃತರಾಗಿದ್ದಾರೆ.

## ಅಡಿ ಟಿಪ್ಪಣಿಗಳು

೧. ಕೆ.ಎಂ. ಶಿವಲಿಂಗಯ್ಯ ಇತಿಹಾಸ ದರ್ಶನ ................................ ಪು. ೨೦೧

೨. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಸ್ಕೃತಿಕ ಇತಿಹಾಸ-೨೦೦೨..... ಪು. ೧೬೨

೩. ಡಾ. ಕೊಟ್ರೇಶ.ಎಮ್. ಮತ್ತು ಇತರರು ಕರ್ನಾಟಕದ ದೇವಾಲಯ ಕೋಶ-೧೯೯೯ ಹಗರಿಬೊಮ್ಮನಹಳ್ಳಿ ಪು. ೨೮೭-೮೮

೪. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಶಾಸನಗಳು ೧೯೯೧ .................. ಪು.೪೯

೫. ಡಾ. ದೇವರಕೊಂಡಾರೆಡ್ಡಿ ಮತ್ತು ಇತರರು ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:೧ ೧೯೯೮ ಹಗರಿಬೊಮ್ಮನಹಳ್ಳಿ ಪು.೨೮೨-೨೯೦.

೬. ಡಾ. ಕೊಟ್ರೇಶ.ಎಮ್. ಮತ್ತು ಇತರರು ಕರ್ನಾಟಕ ದೇವಾಲಯ ಕೋಶ ೧೯೯೯ ಹಗರಿಬೊಮ್ಮನಹಳ್ಳಿ ಪು.೨೮೩-೨೮೪.

೭. ಅದೇ-ಪು.೨೮೫-೮೬

೮. ಡಾ.ದೇವರ ಕೊಂಡಾರೆಡ್ಡಿ ಮತ್ತು ಇತರರು ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:೧ ೧೯೯೮-ಹಗರಿಬೊಮ್ಮನಹಳ್ಳಿ ಪು. ೨೮೭.

## ೨.೩ ಪದದ ನಿಷ್ಪತ್ತಿ (ಗ್ರಾಮ)

ಒಂದು ಪ್ರದೇಶದ ಅಧ್ಯಯನ ಕೈಗೊಳ್ಳುವ ಮೊದಲು ಅದರ ಹೆಸರು, ಹುಟ್ಟು ಇತ್ಯಾಧಿಗಳನ್ನು ಚರ್ಚಿಸುವುದರಿಂದ ಅನೇಕ ಮಾಹಿತಿಗಳು ದೊರಕುವವು, ಲಭ್ಯವಿದ್ದ ಆಧಾರಗಳನ್ನು ಬಳಸಿಕೊಂಡು ಜನಪದರ ಹೇಳಿಕೆಗಳೊಂದಿಗೆ ಮೋರಿಗೆರೆ ನಾಮದ ಹುಟ್ಟು ಮತ್ತು ಬೆಳವಣಿಗೆಯನ್ನು ಚರ್ಚಿಸಲು ಪ್ರಯತ್ನಿಸಿದೆ.

ಜನಪದರ ನಂಬಿಕೆಯಂತೆ ಈ ಗ್ರಾಮದ ನಿಷ್ಪತ್ತಿ ಹೀಗಿದೆ. ಹಿಂದೆ ಕೆರೆಗೆ ಮೋರಿಯನ್ನು ಕಟ್ಟಿ ನೀರನ್ನು ಹೊರಗೆ ಬಿಡುತ್ತಿದ್ದರು. ಅದರ ಪಕ್ಕದಲ್ಲಿ ಊರು ಉದಯವಾಯಿತು. ಅಂದಿನಿಂದ ಈ ಗ್ರಾಮಕ್ಕೆ 'ಮೋರಿಕೆರೆ' ಎಂದು ನಂತರ "ಮೋರಿಗೆರೆ" ಎಂದು ಕರೆಯುತ್ತಾರೆ. ನಮ್ಮ ನಾಡಿನಲ್ಲಿ ಇಂತಹ ಗ್ರಾಮಗಳು ಕಂಡುಬರುತ್ತವೆ. ಚಂಪನಕೆರೆ, ಗಂಜಿಕೆರೆ, ಮಯ್ಯನಕೆರೆ, ಸೆಟ್ಟಿಯಕೆರೆ, ಕಾಟಿಮಕೆರೆಗಳ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ.[೧] ಜನಪದರ ಹೇಳಿಕೆಗಳೊಂದಿಗೆ ಮತ್ತು ಅದಕ್ಕಿಂತಲೂ ಹೆಚ್ಚು ಮಹತ್ವದ ಆಕರಗಳೆಂದರೆ ಶಾಸನಗಳು. "ಮೋರಿಗೇರಿ" ಎಂಬ ಹೆಸರು ಬರಲು ಮುಖ್ಯವಾದ ಅಭಿಪ್ರಾಯವಿದೆ. ಇಲ್ಲಿ ಹೆಚ್ಚಾಗಿ ನವಿಲುಗಳನ್ನು ಸಾಕುತ್ತಿದ್ದರಿಂದ ಈ ಊರಿಗೆ ಮೌಹರಿಯರು ಎಂದು ಕರೆಯುತ್ತಿದ್ದರು ಎಂದು ಪೂರ್ವಜರ ನಂಬಿಕೆ.

ಇನ್ನೂ ಕೆಲವರ ಅಭಿಪ್ರಾಯದ ಪ್ರಕಾರ ಮೋರಿಗೇರಿ ಎಂದು ಹೆಸರು ಬರಲು ಮುಖ್ಯವಾದ ಕಾರಣ ವೆನಂದರೆ ಇಲ್ಲಿ ನೋಟುಗಳಿಗೆ ಮೊಹರ್ ಅಂದರೆ ಮುದ್ರಣವನ್ನು ಹಾಕುತ್ತಿದ್ದರಂತೆ. ಆದ್ದರಿಂದ ಈ ಊರಿಗೆ "ಮೋರಿಗೇರಿ" ಎಂಬ ಹೆಸರು ಪ್ರಾಪ್ತವಾಯಿತು.

ಪ್ರಾಚೀನ ಕಾಲದಿಂದ ಹಿಡಿದು ಇಂದಿಗೂ ಕೆರೆಗಳು ಮನುಷ್ಯನ ಜೀವನದಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ವ್ಯವಸಾಯಕ್ಕೆ ದನಕರುಗಳಿಗೆ, ಪ್ರಾಣಿಗಳಿಗೆ, ಪಕ್ಷಿಗಳಿಗೆ, ಮನುಷ್ಯರಿಗೆ ಕುಡಿಯುವ ನೀರಿಗೆ ಕೆರೆಗಳು ಬೇಕೇ ಬೇಕು. ಹೀಗಾಗಿಯೇ ಕೆರೆಗಳನ್ನು ಕಟ್ಟಿಸುವುದು ಒಂದು ಧರ್ಮದ ಕೆಲಸವಾಗಿ ಪರಿಣಮಿಸಿತ್ತು. ರಾಜನಾದವನು ಅನೇಕ ಕೆರೆ-ಕುಂಟೆಗಳನ್ನು ಕಟ್ಟಿಸುತ್ತಿದ್ದನು. ಇದು ಅವನ ಕರ್ತವ್ಯವಾಗಿತ್ತು. ಶ್ರೀಮಂತ ಜನರೂ ಕೆರೆ ಕಟ್ಟಿಸುವಂಥ ಧಾರ್ಮಿಕ ಕಾರ್ಯಗಳಿಗೆ ಕೈ ಹಾಕುತ್ತಿದ್ದರು. [೨]ಬಯಕಾರ ರಾಮಪ್ಪಯ್ಯನೆನ್ನುವಂಥ ಒಬ್ಬ ಶ್ರೀಮಂತ ವ್ಯಕ್ತಿ ಈ ಮೋರಿಗೇರೆ ಪರಿಸರದಲ್ಲಿ ೧೭ ಕೆರೆಗಳನ್ನು ಕಟ್ಟಿಸಿದುದನ್ನು ಶಾಸನಗಳು ಹೇಳುತ್ತವೆ.

ಮುದಿನೀರ ಎಂದರೆ ಸಮುದ್ರದ ನೀರು ಎಂದು ಅರ್ಥ. ಮುದಿನೀರ ತೀರ್ಥ ಇದ್ದದ್ದು ಇಂದಿನ ರಾಮೇಶ್ವರಂನಲ್ಲಿ ಸಮುದ್ರದ ದಂಡೆಯಲ್ಲಿರುವ ರಾಮೇಶ್ವರವು ಲಾಕುಳ ಶೈವದ ಕೇಂದ್ರವಾಗಿದ್ದು ಅದರ ಶಾಖೆಗಳು ಬಳ್ಳಾರಿ ಜಿಲ್ಲೆಯಲ್ಲಿದ್ದುದನ್ನು ಶಾಸನಗಳು ತಿಳಿಸುತ್ತವೆ. ನೊಳಂಬ ಪಲ್ಲವರ ಕಾಲದಿಂದ ಇಲ್ಲಿ ಮುದಿನೀರ ತೀರ್ಥದ ಶಾಖೆಗಳು ಪ್ರಾರಂಭವಾಗಿರಬೇಕು. ಕ್ರಿ.ಶ ೧೦೪೫ ರ ಅಕ್ಟೋಬರ್ ೨೮ ರ ಶಾಸನ[೩] 'ಮೀರಿಂಗೆರೆ'

ಯು ಲಕುಳೇಶ ಪಾಶುಪತದ ಕೇಂದ್ರವಾಗಿದ್ದುದನ್ನು ತಿಳಿಸುತ್ತದೆ. ಈ ಶಾಸನದಿಂದ ಮೋರಿಗೆರೆಗೆ ಮೊದಲು ಮೀರಿಂಗೆರೆ ನಂತರ ಮೋರಿಗೆರೆ ಎಂಬ ಹೆಸರು ಪ್ರಾಪ್ತವಾಗಿದೆ ಎಂದು ತಿಳಿದು ಬರುತ್ತದೆ

ಕ್ರಿ.ಶ ೧೭-೧೦-೧೦೪೬ ರ [೪]ಶಾಸನವು ಮೋರಿಗೆರೆಯನ್ನು ಮೋರೆಂಗೆರೆ ಎಂದು ಉಲ್ಲೇಖಿಸುತ್ತದೆ. ಮೋರಿಗೆರೆ ಯ ಮೊದಲ ಹೆಸರು “ಮೀರಿಂಗೆರೆ ” ಎಂದು ತಿಳಿದು ಬರುತ್ತದೆ.

ಮೋರಿಗೆರೆ ಇತಿಹಾಸ ಪ್ರಸಿದ್ಧ ಊರು, ಶಾಸನಗಳಲ್ಲಿ ಶ್ರೃಮನ್ಮೋರಿಂಗೆರೆ ಎಂದು ಮೋರಿಗೆರೆ ವರ್ಣಿಸಲ್ಪಟ್ಟಿದೆ. [೫]“ಕೋಗಳಿ ನಾಡೆಂಬ ಚೆಲುವೆಯ ತಿಲಕದಂತಿರುವ ಮೋರಿಂಗೆರೆ ಎಂದು ಶಾಸನಕಾರರು ಹೇಳಿದ್ದಾರೆ”. [೬]ಈ ಊರಿನ ಸ್ಥಳ ನಾಮಕ್ಕೂ ಚಂದ್ರಗುಪ್ತ ಮೌರ್ಯನಿಗೂ ಸಂಬಂಧವನ್ನು ಕಲ್ಪಿಸಲಾಗಿದೆ. ಶ್ರೀ ವೀರಭದ್ರ ಶರ್ಮರು ತಿಳಿಸುವಂತೆ ಉತ್ತರ ಭಾರತದಿಂದ ಭದ್ರಬಾಹು ಮುನಿಗಳ ಜೊತೆ ಬಂದ ಚಂದ್ರಗುಪ್ತ ಮೌರ್ಯನು ಈ ಗ್ರಾಮದಲ್ಲಿ ಸಲ್ಲೇಖನ ವ್ರತ ಹಿಡಿದು ದೇಹತ್ಯಾಗ ಮಾಡಿರಬೇಕು. ಅದಕ್ಕಾಗಿ[೭] ಮೌರ್ಯಕೇರಿ-ಮೌರ್ಯಗೇರಿ-ಮೋರಗೇರಿ ಎಂದು ಹೆಸರು ಬಂದಿರಬಹುದೆಂದು ಅಭಿಪ್ರಾಯಿಸುತ್ತಾರೆ. [೮]ಕುಂಬಾ ಸದಾ ಶಿವಪ್ಪನವರ ಪ್ರಕಾರ ಮಯೂರಿ ಎಂದರೆ ನವಿಲು, ನವಿಲುಗಳು ಹೆಚ್ಚಾಗಿರುವ ಪ್ರದೇಶವಾದ ಇದು ಮಯೂರಕೆರೆ, ಮೋರಿಗೇರಿ ಆಗಿರಬೇಕು ಎನ್ನುತ್ತಾರೆ. ಇಲ್ಲಿ ಜನರು ಹೆಚ್ಚಾಗಿ ನವಿಲುಗಳನ್ನು ಸಾಕುತ್ತಿದ್ದರು ಎಂದು ತಿಳಿದು ಬರುತ್ತದೆ.

ಇಲ್ಲಿಯ ಐತಿಹ್ಯದ ಪ್ರಕಾರ [೯]ವಿಜಯನಗರದ ಅರಸರು ಪಕ್ಕದ ಗ್ರಾಮ ಸೊನ್ನದಲ್ಲಿ ಸುವರ್ಣ ನಾಣ್ಯಗಳನ್ನು ತಯಾರಿಸುತ್ತಿದ್ದು ಅಲ್ಲಿ ತಯಾರಾದ ನಾಣ್ಯಗಳು ರಾಜ ಮುದ್ರೆಯಿಂದ ಅಧಿಕೃತಗೊಂಡು ಚಲಾವಣೆಗೆ ಬರಬೇಕಾದರೆ ಅವುಗಳಿಗೆ ಮುದ್ರೆಯನ್ನು ಇಲ್ಲಿ ಹಾಕುತ್ತಿದ್ದರಿಂದ “ಮೋಹರಂಗೆರೆ” ಮೋರಗೆರೆ ಆಗಿರಬೇಕೆಂದು ನಂಬಲಾಗಿದೆ.

ಕ್ರಿ.ಶ.೧೧೩೯ ರ ಶಾಸನ ಮೋರಿಗೆರೆಯನ್ನು[೧೦] ತೀರ್ಥ ಎಂದು ಕರೆದಿದೆ. ಹೀಗಾಗಿ ಜೈನರು ಪಾಠ ಪ್ರವಚನ ಧಾರ್ಮಿಕ ಕಾರ್ಯ ಕಲಾಪಗಳಿಂದಾಗಿ ಈ ಗ್ರಾಮಕ್ಕೆ ತೀರ್ಥಮಾನ್ಯತೆ ತಂದು ಕೊಟ್ಟಿದ್ದರು. ಈ ಎಲ್ಲಾ ಆಕರಗಳಿಂದ ನಾವು ಅಧ್ಯಯನ ಮಾಡಿದಾಗ ಮೋರಗೇರೆ ಯಾವ ರೀತಿ ಉತ್ಪತ್ತಿಯಾಯಿತು ಎಂಬ ಅಂಶ ತಿಳಿದು ಬರುತ್ತದೆ.




ಈ ರೀತಿಯಾಗಿ ಮೋರಗೆರೆ ಗ್ರಾಮ ಉದಯದ ಬಗ್ಗೆ ಗುರುತಿಸಬಹುದು.

## ಅಡಿ ಟಿಪ್ಪಣಿಗಳು :

೧) ಬಡಿಗೇರ ವಾಸುದೇವ, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ೧೯೯೭......ಪು.೫೬

೨) ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಶಾಸನಗಳು ೧೯೯೧........ಪು.೪೦

೩) ಅದೇ-೧೯೯೧ .........ಪು. ೪೯

೪) ಡಾ. ದೇವರ ಕೊಂಡಾರೆಡ್ಡಿ ಮತ್ತು ಸಂಪಾದಕರು- ಕನ್ನಡ ವಿಶ್ವವಿದ್ಯಾಲಯ ಶಾಸನಗಳ ಸಂಪುಟ-೧- ೧೯೯೮- ಹಗರಿಬೊಮ್ಮನಹಳ್ಳಿ ......... ಪು. ೨೮೮

೫) ಪರಮೇಶ್ವರಯ್ಯ ಸೊಪ್ಪಿಮಠ- ಹಗರಿಬೊಮ್ಮನಹಳ್ಳಿ ತಾಲೂಕು ದರ್ಶನ ೨೦೦೫- ಪು.೧೨

೬) ಅದೇ-೨೦೦೫ ಪು.೧೨

೭) ಅದೇ- ೨೦೦೫ ಪು.೧೩

೮) ಅದೇ-೨೦೦೫ ಪು.೧೩

೯) ಅದೇ-೨೦೦೫ ಪು.೧೩

೧೦) ಅದೇ-೨೦೦೫ ಪು.೧೩

# ಅಧ್ಯಾಯ : ೩ ಚಾರಿತ್ರಿಕ ನೋಟ

## ೩.೧ ರಾಜಕೀಯ ಚರಿತ್ರೆ (ಆಳಿದ ಅರಸರುಗಳು)

ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಅಧ್ಯಯನ ಮಾಡುವಾಗ ಪ್ರಾಚೀನ ಕುರುಹುಗಳು ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ನಾಡಿನ ಆಳ್ವಿಕೆಯಲ್ಲಿ ಚಕ್ರವರ್ತಿಗಳು, ಮಹಾಮಂಡಳೇಶ್ವರರು, ಮಹಾಸಾಮಂತರು, ಪ್ರಭುಗಾವುಂಡ ಮತ್ತು ಗಾವುಂಡರು ನಾಡಿನ ವಿವಿಧ ಭಾಗಗಳಲ್ಲಿ ಒಡೆಯರಾಗಿರುತ್ತಾರೆ. ಅದೇ ಪ್ರಕಾರ ಗ್ರಾಮದ ರಾಜಕೀಯ ಚರಿತ್ರೆಯಲ್ಲಿ ದೊರೆಯುವ ಲಿಖಿತ ಆಧಾರಗಳ ಹಿನ್ನಲೆಯಲ್ಲಿ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಪಾಳೇಗಾರರು ಮತ್ತು ಅವರ ಅಧಿಕಾರಿಗಳು ಸಾಮ್ರಾಜ್ಯದ ವಿಸ್ತರಣೆಯಲ್ಲಿ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ಅಭಿವೃದ್ಧಿಗೊಳಿಸುವಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ. ರಾಜ ಮನೆತನಗಳ ಹಿನ್ನಲೆಯಲ್ಲಿ ರಾಜಕೀಯ ರಾಜಕೀಯ ಚರಿತ್ರೆಯನ್ನು ಈ ಕೆಳಗಿನಂತೆ ವಿವರಿಸಿದೆ.

ಬಳ್ಳಾರಿ ಜಿಲ್ಲೆಯಲ್ಲಿ ದೊರೆಯುವ ಪ್ರಾಚೀನ ಲಿಖಿತ ದಾಖಲೆಗಳೆಂದರೆ, ಅಶೋಕನ ಶಾಸನಗಳು, ಅಂದರೆ ಮೌರ್ಯರ ಆಳ್ವಿಕೆಯಿಂದ ಇತಿಹಾಸ ಪ್ರಾರಂಭವಾಗುತ್ತದೆ. ಕೋಳೂರಿನಲ್ಲಿ ದೊರೆಯುವ ಕ್ರಿ.ಶ.೧೧೪೭ ಡಿಷಂಬರ್ ೨೫ರ ಶಾಸನವು[1] ಈ ಜಿಲ್ಲೆಯನ್ನು ಆಳಿದ ಚಕ್ರವರ್ತಿಗಳ ವಂಶವನ್ನು ಈ ರೀತಿಯಾಗಿ ತಿಳಿಸುತ್ತದೆ.

ವಸುಧಾಕಾಂತೆಯ ಕುಂತಳ ಪ್ರತಿಮಾಮಾದೀಕುಂತಳ ಕ್ಷೋಣಿಯಂ,

ವಸುಧಾನಂದನ ನಂದಗುಪ್ತಕುಲ ಮೌರ್ಯಕ್ಷ್ಮಾ ಪರಳ್ದರ್ಬ್ಬಳಿಕೆಸೆಯಲು

ರಾಷ್ಟ್ರನೃಪಾಳರಾಳ್ವರವರಿಂದ ಮತ್ತೆ ಚಾಳುಕ್ಯವಂಶಸಮುದ್ಭೋತರನೇಕರಾಳ್ದವರೋಳ್ತಾಂ

ಚಕ್ರಿ ಸೋಮೇಶ್ವರಂ॥

ಈ ಪದ್ಯ ನಂದರು, ಗುಪ್ತರು, ಮೌರ್ಯರು, ರಾಷ್ಟ್ರಕೂಟರು, ಚಾಲುಕ್ಯರು, ಚಕ್ರವರ್ತಿಗಳಾಗಿ ಆಳಿದರೆಂದು ತಿಳಿಸುತ್ತದೆ. ಕೋಳೂರು ಹಗರಿಬೊಮ್ಮನಹಳ್ಳಿಗೆ ಹತ್ತಿರವಾದ ಪ್ರದೇಶವಾದ್ದರಿಂದ ಮೋರಗೆರಿ ಮೇಲಿನ ಅರಸರ ಆಳ್ವಿಕೆಗೊಳಪಟ್ಟಿತ್ತು ಎಂಬುದನ್ನು ನಿರ್ಧರಿಸಬಹುದು.

### ನಂದರು

ಭಾರತೀಯ ಇತಿಹಾಸದಲ್ಲಿ ಮೊಟ್ಟಮೊದಲ ರಾಜ ಮನೆತನದ ಆಳ್ವಿಕೆ ನಂದರಿಂದ ಪ್ರಾರಂಭವಾಗುತ್ತದೆ. ಚಾಣುಕ್ಯನಿಂದಾಗಿ ಈ ನಂದರು ಪ್ರಭುತ್ವವನ್ನೇ ಕಳೆದುಕೊಳ್ಳುತ್ತಾರೆ. ಉತ್ತರ ಭಾರತದಲ್ಲಿ ಚಕ್ರವರ್ತಿಗಳಾಗಿದ್ದ ನಂದ ವಂಶದವರ ಒಡೆತನಕ್ಕೆ ಬಳ್ಳಾರಿ ಜಿಲ್ಲೆ ಒಳಪಟ್ಟಿತ್ತೆಂದು, ೧೨ನೆಯ ಶತಮಾನದ ಶಾಸನಗಳು ಉಲ್ಲೇಖಿಸುತ್ತವೆ. ಅಲ್ಲದೆ ಕ್ರಿ.ಶ.೧೫೦೦ರಲ್ಲಿ ರಚಿಸಿರುವ ಸಿಂಗಿರಾಜ ಪುರಾಣದಲ್ಲಿ[2] ಪಟ್ಟದಕಲ್ಲಿನ ಇತಿಹಾಸವನ್ನು ತಿಳಿಸುತ್ತಾ ಇಲ್ಲಿ ಪಟ್ಟ ಹೊಂದಿದ ರಾಜವಂಶಗಳ ಬಗ್ಗೆ ಈ ರೀತಿಯಾಗಿ ತಿಳಿಸುತ್ತದೆ.

ನಂದರು ನಂದರ್ಗಳೊಂಬತ್ತು ಪೀಳಿಗೆಯಾಳ್ದು
ಹಿಂದೆ ಗುಪ್ತರ್ಗುಪ್ತರೆಂಬರಸುಗಳು ಹತ್ತ
ರೆದ ಮೋರೆಯ ಮೋರೆಯಗಘಳಿಪ್ಪತ್ತೊಂದು ಸಿಂಹಾಸನಗಳಿಂದ
ಬಂದುದಿಪ್ಪತ್ತೇಳು ಕಾದಂಬನಾಮರಾ
ಜೇಂದ್ರರಲ್ಲಿಂ ಬಳಿಕ ಚಾಳೋಕ್ಯ ಚಕ್ರೇಶ
ವೃಂದವಿಪ್ಪತ್ತೆಂಟು ಪಟ್ಟವಡೆದಾಪಟ್ಟಕಲ್ಲೆನಿಪ ಪುರವರದಲಿ

ನಂದರು, ಗುಪ್ತರು, ಮೌರ್ಯರು, ಕದಂಬರು, ಚಾಲುಕ್ಯರು, ಪಟ್ಟಹೊಂದಿದ ಪಟ್ಟದಕಲ್ಲು ಎಂದು ಹೇಳಿರುವುದರಿಂದ ಉತ್ತರ ಭಾರತದ ಚಕ್ರವರ್ತಿಗಳಾದ ನಂದರು, ಮೌರ್ಯರು ಮತ್ತು ಗುಪ್ತರ ಆಳ್ವಿಕೆಗೆ ಉತ್ತರ ಕರ್ನಾಟಕ ಒಳಗೊಂಡಿದ್ದು, ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ಮೋರಗೆರೆ ಪರಿಸರ ಇದಕ್ಕೆ ಹೊರತಾಗಿಲ್ಲವೆಂದು ಹೇಳಬಹುದು. ನಂದರ ಆಳ್ವಿಕೆಯನ್ನು ನಿರೂಪಿಸುವ ಶಾಸನಗಳು ಇಲ್ಲಿ ಲಭ್ಯವಾಗಿಲ್ಲ. ಆದರೆ ಪರಂಪರಾಗತವಾಗಿ ಬಂದ ನಂಬಿಕೆಯನ್ನು ಆಧರಿಸಿ ನಂದರ ಆಳ್ವಿಕೆಗೆ ಈ ಜಿಲ್ಲೆಯು ಒಳಪಟ್ಟಿತ್ತೆಂದು ಹೇಳಬಹುದು.

**ಮೌರ್ಯರು**

ಸಾಹಿತ್ಯ ದಾಖಲೆಗಳ ಪ್ರಕಾರ ಭಾರತದ ಮೊಟ್ಟ ಮೊದಲ ಸಾಮ್ರಾಜ್ಯ ನಂದರ ಮಗಧ ಸಾಮ್ರಾಜ್ಯವಾಗಿದೆ. ಚಾಣುಕ್ಯನ ಚಾತುರ್ಯತೆಯಿಂದ ಚಂದ್ರಗುಪ್ತ ಮೌರ್ಯ, ನಂದರನ್ನು ಸೋಲಿಸಿ ಮೌರ್ಯವಂಶದ ಚಕ್ರಾಧಿಪತ್ಯವನ್ನು ಸ್ಥಾಪಿಸುತ್ತಾನೆ. ಅಶೋಕ ಚಕ್ರವರ್ತಿಯ ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ದೊರೆತಿವೆ.

ಚಂದ್ರಗುಪ್ತ ವಮೌರ್ಯನು ಜಿನದೀಕ್ಷೆತೊಟ್ಟು ಭದ್ರಬಾಹುವಿನೊಂದಿಗೆ ಶ್ರವಣಬೆಳಗೋಳಕ್ಕೆ ಬಂದು ನಿರ್ವಾಣ ಹೊಂದಿದ ಅಂಶವನ್ನು ೭ನೇಯ ಶತಮಾನದ ಶಾಸನ[೩] ಹೀಗೆ ನಿರೂಪಿಸುತ್ತದೆ.

ಭದ್ರಬಾಹು ಸಚನ್ದ್ರ ಗುಪ್ತ ಮುನೀನ್ದ್ರಯುಗ್ಮ ದಿನೊಪೆದಲ್
ಭದ್ರಮಾಗಿದ ಧರ್ಮಮನ್ದುವಚಿಕ್ಕೆ ವನ್ದಿನಿಸಳ್ಕಲೋ
ವಿದ್ರು ಮಾಧಕ ಶಾಸ್ತಿಸೇನ ಮುನೀಶನಾಕ್ಕವ ವೆಳ್ಗೋಳು
ಅದ್ರಿ ಮೇಲಶನಾದಿವಿಟ್ಟ ಪುನರ್ಭವಕ್ಕೆ ರೆ ಆಗಿ॥

ಈ ಪದ್ಯದಲ್ಲಿ ಶಾಂತಿ ಸೇನ ಮುನಿಯು ಸಲ್ಲೇಖನ ವ್ರತ ಹಿಡಿದು ಮೋಕ್ಷ ಹೊಂದಿರುವ ಸ್ಥಳವಾದ ಈ ಬೆಟ್ಟಕ್ಕೆ ಹಿಂದೆ ಭದ್ರಬಾಹು ಚಂದ್ರಗುಪ್ತನೊಂದಿಗೆ ಬಂದಿದ್ದರು. ಪ್ರಸಿದ್ಧವಾದ ಈ ಬೆಟ್ಟದ ಮೇಲೆ ಶಾಂತಿಸೇನ ಮುನಿ ಸಲ್ಲೇಖನ ವ್ರತದಿಂದ ಮೋಕ್ಷಹೊಂದಿ

ಈ ಬೆಟ್ಟದ ಕೀರ್ತಿಯನ್ನು ಹೆಚ್ಚಿಸಿದನು ಎಂದು ಹೇಳಲಾಗಿದೆ. ಇಲ್ಲಿ ಬರುವ ಚಂದ್ರಗುಪ್ತ ಮೌರ್ಯನ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಚಂದ್ರಗುಪ್ತ ಮೌರ್ಯ ಎಂದು ಹೇಳಿದರೆ ಮತ್ತೆ ಕೆಲವರು ಅಶೋಕನ ಮೊಮ್ಮಗ ಸಂಪ್ರತಿ ಗುಪ್ತನೆಂದು ಹೇಳುತ್ತಾರೆ.[೪] ಆದರೆ ವಡ್ಡಾರಾಧನೆಯಲ್ಲಿ ಬರುವ ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತನೆಂದು ಸ್ಪಷ್ಟವಾಗಿ ಹೇಳಿದೆ.

ಅಶೋಕ ಚಕ್ರವರ್ತಿಯ ಶಾಸನಗಳು ಚಿತ್ರದುರ್ಗ ಜಿಲ್ಲೆಯ ಸಿದ್ಧಾಪುರ, ಜಟಿಂಗ ರಾಮೇಶ್ವರ, ಬ್ರಹ್ಮಗಿರಿ, ರಾಯಚೂರು ಜಿಲ್ಲೆಯ ಮಸ್ಕಿ, ಕೊಪ್ಪಳದ ಗವಿಮಠ, ಬಳ್ಳಾರಿ ಜಿಲ್ಲೆಯ ಉದಯಗೋಳ, ನಿಟ್ಟೂರುಗಳಲ್ಲಿ ದೊರೆತಿದ್ದು, ಅವುಗಳ ಕಾಲ ಕ್ರಿ.ಪೂ.೨೫೯-೨೫೮ ಎಂದು ನಿರ್ಧರಿಸಲಾಗಿದೆ. ಇವು ಬ್ರಾಹ್ಮೀ ಲಿಪಿಯಲ್ಲಿದ್ದು, ಪ್ರಾಕೃತ ಭಾಷೆಯಲ್ಲಿವೆ. ನಿಟ್ಟೂರಿನ ಶಾಸನವು ಅಶೋಕನು ಧರ್ಮ ಪ್ರಚಾರ ಮಾಡುತ್ತಾ ೨೫೬ ದಿನಗಳು ಕಳೆದನೆಂದೂ ತನ್ನ ಗಡಿನಾಡಿನ ಮೇಲು ವರ್ಗದ ಹಾಗೂ ಕೆಳವರ್ಗದ ಜನರೆಲ್ಲ ಧರ್ಮಾಸಕ್ತರಾಗಬೇಕೆಂಬುದನ್ನು ತಿಳಿಸುತ್ತದೆ. ಅದೇ ನಿಟ್ಟೂರಿನ ಇನ್ನೊಂದು ಶಾಸನ 'ರಾಜಾ ಅಸೋಕೋ ದೇವಂ" ಎಂದು ಹೇಳುತ್ತಾ ತಂದೆ-ತಾಯಿ, ಗುರು-ಹಿರಿಯರಿಗೆ, ಬ್ರಾಹ್ಮಣರಿಗೆ ವಿನಯರಾಗಿರಬೇಕೆಂದು ತಿಳಿಸಿದೆ. ಮೌರ್ಯ ಚಕ್ರವರ್ತಿಗಳ ಶಾಸನಗಳು ಬಳ್ಳಾರಿ ಜಿಲ್ಲೆಯ ಪರಿಸರದಲ್ಲಿ ದೊರೆಯುವುದರಿಂದ ಬಳ್ಳಾರಿ ಜಿಲ್ಲೆ ಮೌರ್ಯರ ಆಡಳಿತಕ್ಕೊಳ ಪಟ್ಟಿತ್ತೆಂದು ನಿರ್ಧರಿಸಬಹುದು.

ಬ್ರಹ್ಮಗಿರಿ ಶಾಸನದ ಉಲ್ಲೇಖನದಂತೆ ಇದು (ಇಸಿಲಾ) ಸಾಮ್ರಾಜ್ಯದ ದಕ್ಷಿಣ ಗಡಿಯಾಗಿದ್ದು, ಇಸಿಲಾ ಆಡಳಿತ ಕೇಂದ್ರವನ್ನಾಗಿಮಾಡಿಕೊಂಡ ಇವರು ಧರ್ಮ ಪ್ರಚಾರಕ್ಕಾಗಿ ಮಹಾಮಾತ್ರರನ್ನು ನೇಮಿಸಿದ್ದರು. ಪತಂಜಲಿ 'ಶಿವಸ್ಕಂದೋ ವಿಶಾಖ ಇತಿ....... ಮೌರ್ಯೆಶ್ಚರ್ಹಿ ಕಣ್ಯಾರ್ಥಿಭಿರರ್ಚಾ ಕಲ್ಪಿತಾ' ಎಂದು ಹೇಳುತ್ತಾನೆ. ಮೌರ್ಯರಿಗೂ ಮತ್ತು ನವಿಲಿಗೂ (ಮೋರಿಯ) ಗೋತ್ರ ಸಂಬಂಧವಿದ್ದಿತು.[೫] ಒಟ್ಟಾರೆ ಬಳ್ಳಾರಿ ಜಿಲ್ಲೆಯ ಪರಿಸರವು ಮೌರ್ಯರ ಆಳ್ವಿಕೆಗೆಒಳಪಟ್ಟಿತ್ತೆಂದು ಊಹಿಸಬಹುದು.

**ಶಾತವಾಹನರು**

ಮೌರ್ಯರ ನಂತರ ಪಾಟಲೀಪುತ್ರವನ್ನು ಶುಂಗರು, ಕಣ್ವರು ಆಳಿದರು. ಇವರ ನಂತರ ಬಂದವರೆ ಶಾತವಾಹನರು. ಇವರು ಕ್ರಿ.ಪೂ.೨೨೦ ರಿಂದ ಕ್ರಿ.ಶ.೨೩೦ರವರೆಗೆ, ಬನವಾಸಿ ಮತ್ತು ಪ್ರತಿಷ್ಠಾನವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಇವರ ಮೂಲಸ್ಥಳ ಬಳ್ಳಾರಿ ಜಿಲ್ಲೆಯೆಂದು ಕೆಲವು ವಿದ್ವಾಂಸರ ಹೇಳಿಕೆಯಾದರೂ ಶಾತವಾಹನರು ಕರ್ನಾಟಕದವರೋ, ಆಂಧ್ರದವರೋ ಎಂಬುದಕ್ಕೆ ವಿದ್ವಾಂಸರಲ್ಲಿ ವಾದ-ವಿವಾದಗಳಿವೆ.[೬] ಪುರಾಣಗಳಲ್ಲಿ ಇವರನ್ನು 'ಆಂಧ್ರ ಭೃತ್ಯರು' ಎಂದು ಕರೆದಿರುವುದು ಈ ವಾದಗಳಿಗೆ ಕಾರಣವಾಗಿದೆ. ಈ ವಂಶದ ಅರಸರು ವೈಜಯಂತಿ ಮತ್ತು ಪೈಠಾಣ ಎನ್ನುವ ಕನ್ನಡ ಪ್ರದೇಶಗಳನ್ನು ಆಳಿದ್ದು, ಇವರು ಕನ್ನಡಿಗರೆಂಬ ಅಭಿಪ್ರಾಯಗಳಿವೆ.

ಆಂಧ್ರಪ್ರದೇಶದ ಶ್ರೀಕಾಕುಳ ಮತ್ತು ಧನಕಟಕಗಳಲ್ಲಿ ಈ ವಂಶದ ಕೆಲವರು ಆಳಿದ್ದುದು ತಿಳಿದು ಬರುವದಿರಿಂದ ಹಾಗೂ ಕೊಂಡಾಪುರದಲ್ಲಿ ಶಾತವಾಹನರ ನಾಣ್ಯಗಳು ಮತ್ತು ಇತರ ಕುರುಹುಗಳು ದೊರೆಯುವುದರಿಂದ, ಇವರು ಆಂದ್ರದವರೆಂಬ ಇನ್ನೊಂದು ವಾಧವಿದೆ. ಭಿನ್ನಾಭಿಪ್ರಾಯಗಳು ಏನೇ ಇದ್ದರೂ ಬಳ್ಳಾರಿ ಜಿಲ್ಲೆಯ ಪರಿಸರ ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು. ಆದೋನಿ ತಾಲೂಕಿನ ಮ್ಯಾಕಡೋಣಿಯ ಶಾತವಾಹನ ಶ್ರೀ ಪುಲಮಾಯಿಯ ಶಾಸನದಲ್ಲಿ ಈ ಪ್ರಾಂತ ಶಾತವಾಹನರೆಂದು ತಿಳಿಸುತ್ತದೆ. ಹಿರೇ ಹಡಗಲಿಯ ತಾಮ್ರ ಶಾಸನದಲ್ಲಿ[೬] 'ಸಾತಹನಿರ ಘಟ್ಟ' 'ಶಾತನೀಹಾರ' ಎಂದಿದೆ. ಆದ್ದರಿಂದ ಬಳ್ಳಾರಿ ಪ್ರದೇಶ ಶಾತವಾಹನರ ಪ್ರದೇಶವೆಂದು ಕರೆಯುತ್ತಿದ್ದರು. ಡಾ.ವಿ.ಎಸ್.ಸುಖ್ತಂಕರರಂಥ ವಿದ್ವಾಂಸರು ಶಾತವಾಹನರು ಬಳ್ಳಾರಿ ಜಿಲ್ಲೆಯವರೆಂದು ಹೇಳಿದ್ದಾರೆ. ಮ್ಯಾಕ್‌ಡೋಣಿ ಮತ್ತು ಹಿರೇಹಡಗಲಿಯಲ್ಲಿ ದೊರೆತ ತಾಮ್ರ ಪತ್ರಗಳಲ್ಲಿ ಬಳ್ಳಾರಿ ಜಿಲ್ಲೆಯ ಪ್ರದೇಶವನ್ನು 'ಶಾತಹನಿಹಾರ' 'ಸಾತವನಿರಠ್ಠ'ವೆಂದು ಕರೆದುದನ್ನು ಇವರು ಆಧಾರವಾಗಿ ಕೊಡುತ್ತಾರೆ.

ಶಾತವಾಹನ ವಂಶದ ಸ್ಥಾಪಕ, ಶ್ರೀಮುಖ ಕುಂತಳ ಶಾತಕರ್ಣಿ. ಹಾಲರಾಜ ಮೊದಲಾದವರು ಉತ್ತರ ಕನ್ನಡ, ಬಳ್ಳಾರಿ, ಧಾರವಾಡ ಜಿಲ್ಲೆಗಳ ಪ್ರದೇಶವನ್ನು ಆಳುತ್ತಿದ್ದರು, ವಾತ್ಸಾಯನನ 'ಕಾಮಸೂತ್ರ'ದಲ್ಲಿ ಕುಂತಳ ಶಾತಕರ್ಣಿಯ ಉಲ್ಲೇಖವಿದೆ. ಶಾತವಾಹನ ರಾಜರಲ್ಲಿ ೧೭ನೆಯ ರಾಜ ಹಾಲ ಪ್ರಸಿದ್ಧ ಅರಸ 'ಗಥಾ ಸಪ್ತಸತಿ'ಎಂಬ ಕೃತಿಯನ್ನು ರಚಿಸಿದ್ದು. ಇದರಲ್ಲಿ ೭೦೦೦ ಶೃಂಗಾರ ಕಥೆಗಳಿವೆ. ಹಾಲನಿಗೆ ಶಾಲಿವಾಹನನೆಂಬ ಹೆಸರಿತ್ತೆಂದೂ ಕ್ರಿ.ಶ.೭೮ ರಿಂದ ಪ್ರಾರಂಭಗೊಂಡ ಶಾಲಿವಾಹನ ಶಕವನ್ನು ಹಾಲನೇ ಪ್ರಾರಂಭಿಸಿದನೆಂದು ಅನೇಕ ವಿದ್ವಾಂಸರ ಅಭಿಪ್ರಾಯವಾಗಿದೆ. ಇನ್ನೂ ಅನೇಕ ಚಕ್ರವರ್ತಿಗಳು ಈ ಸಾಮ್ರಜ್ಯದಲ್ಲಿ ಆಳ್ವಿಕೆ ನಡೆಸಿದ್ದಾರೆ.[೮]

ಕೊಟ್ಟೂರು, ಹೆಗ್ಗಡೆಹಾಳು, ಹಾಳು ದೇವಾಲಪುರ, ದೇವಗಿರಿ, ಚೋರನೂರು, ಕೂಡ್ಲಿಗಿ, ಶಿವಪುರ, ಹಂಪಿ, ಕುರುಗೋಡು, ಎಮ್ಮಿಗನೂರು, ಕಂಪ್ಲಿ, ಬಳ್ಳಾರಿ, ಸಿದ್ದಾಪುರ, ಕೋಗಳಿ, ಬ್ರಹ್ಮಗಿರಿ ಮುಂತಾದ ಮೋರಗೆರೆಯ ನೆರೆಹೊರೆಯ ಸೀಮೆಗಳಲ್ಲಿ, ಕೋಗಳಿ ವೀರಭದ್ರಗುಡಿ ಮುಂದೆ ಇರುವ ಶಾಸನ್‌ದಪ್ರಕಾರ ಶಾಲಿವಾಹನ ಶಕ ವರ್ಷ ೧೪೫೪ನೆಯ ಖರ, ಜೇಷ್ಟ, ಬ.೧೦ಎಂದಿದೆ. ಆದರೆ ಖರ ಸಂವತ್ಸರವು ಶಾಲಿವಾಹನ ಶಕ ವರ್ಷ ೧೪೫೩ರಲ್ಲಿ ಬಂದಿದೆ. ಇದು ಕ್ರಿ.ಶ. ೧೦-೦೬-೧೫೩೧ಕ್ಕೆ ಇದು ಸಮವಾಗುತ್ತದೆ. ಕೋಗಳಿ ವೀರಭದ್ರದೇವರನ್ನು ಕೊಟ್ಟೂರು ತಿಪ್ಪಿಶೆಟ್ಟಿ ಪ್ರತಿಷ್ಠಾಪಿಸಿದ, ಇದರ ನಂದಾ ದೀಪಕ್ಕಾಗಿ ಮೋಕೆಯ ಬಸೆಟ್ಟಿ, ತಿಪ್ಪಿಶೆಟ್ಟಿ, ಮಾಸಿಗೆಯ ಗುರುವಪ್ಪ, ವೋದಿನ ಲಿಂಗಿ ಶೆಟ್ಟಿ, ಜಂದಿಯ ಲಿಂಗಿಶೆಟ್ಟಿ ಮೊದಲಾದ ವರ್ತಕರು ೧ ಹೆರಿಗೆ ೧ ಕಾಸು ಬಿಟ್ಟರು. ಇದು ಕೂಡಾ ಮೋರಗೆರೆ ಪರಿಸರದಲ್ಲಿ ಕಂಡು ಬರುತ್ತದೆ. ಈ ಪರಿಸರದಲ್ಲಿ ಶಾತವಾಹನರ

ಕಾಲದ ಅವಶೇಷಗಳು ಕಂಡುಬರುವುದರಿಂದ ಮೋರಗೆರೆ ಪರಿಸರ ಶಾತವಾಹನರ ಆಡಳಿತಕ್ಕೆ ಒಳಪಟ್ಟಿತ್ತೆಂಬುದನ್ನು ದೃಢಪಡಿಸಿಕೊಳ್ಳಬಹುದು. 'ಸಂಡೂರಿನಲ್ಲಿರುವ ಪಾರ್ವತಿ ದೇವಾಲಯ[೧೦]' ಶಾತವಾಹನರ ಕಾಲದಿಂದಲೇ ಅಭಿವೃದ್ಧಿ ಹೊಂದುತ್ತಾಬಂತೆಂದು ವಿದ್ವಾಂಸರ ಅಭಿಪ್ರಾಯವಾಗಿದೆ, ಹೀಗೆ ಮೋರಗೆರೆ ಪರಿಸರದಲ್ಲಿ ಶಾತವಾಹನರು ಅಧಿಕಾರ ನಡೆಸಿರಬಹುದೆಂದು ಊಹಿಸಬಹುದಾಗಿದೆ.

## ಗುಪ್ತರು

ಭಾರತದ ಇತಿಹಾಸದಲ್ಲಿ ಗುಪ್ತರ ಆಳ್ವಿಕೆಯು ಮುಖ್ಯವಾದುದು, ಉತ್ತರ ಭಾರತದಲ್ಲಿ ಚಕ್ರವರ್ತಿಗಳಾಗಿದ್ದ ಗುಪ್ತರ ಆಳ್ವಿಕೆಗೆ ಕೆಲವು ವರ್ಷಗಳ ಕಾಲವಾದರೂ ಈ ಬಳ್ಳಾರಿ ಜಿಲ್ಲೆ ಒಳಪಟ್ಟಿತ್ತೆಂದು ಕೋಳೂರಿನ ಶಾಸನ ತಿಳಿಸುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಗುಪ್ತರು ಆಳ್ವಿಕೆ ನಡೆಸಿದರೆಂದೂ ಬೇರೆ ಹೇಳಬೇಕಾಗಿಲ್ಲ ಕ್ರಿ.ಶ.೩೪೦ರಲ್ಲಿ ದಕ್ಷಿಣ ಭಾರತಕ್ಕೆ ಡಂಡಯಾತ್ರೆ ಕೈಗೊಂಡ ಸಮುದ್ರ ಗುಪ್ತನು ಕಂಚಿಯ ವಿಷ್ಣುಗೋಪನನ್ನುಸೋಲಿಸಿದ ವಿವರ ಅಲಹಾಬಾದ್ ಸ್ತಂಬ ಶಾಸನದಲ್ಲಿದೆ. ದಕ್ಷಿಣ ಭಾರತವನ್ನು ಸೋಲಿಸಿದ ಸಮುದ್ರ ಗುಪ್ತನಿಗೆ ಬಳ್ಳಾರಿ ಜಿಲ್ಲೆಯನ್ನೊಳಗೊಂಡು, ಮೋರಗೆರೆ ಪ್ರದೇಶವು ಸಹ ಇವನ ಅಧೀನವಾಗಿ ಇರಬೇಕಾಯಿತು. ಎಂದು ಊಹಿಸಬಹುದಾಗಿದೆ. ಈ ಸಂಧರ್ಭದಲ್ಲಿ ಸಮುದ್ರಗುಪ್ತನು ತನ್ನ ವಂಶಸ್ಥರನ್ನು ಈ ಭಾಗಕ್ಕೆ ಒಡೆಯರನ್ನಾಗಿ ನೇಮಿಸಿರಬೇಕು, ಹೀಗೆ ನೇಮಿಸಲ್ಪಟ್ಟ ಗುಪ್ತ ವಂಶಕ್ಕೆ ಸಂಬಂಧಪಟ್ಟ ಶಾಖೆಯೊಂದು ಬಳ್ಳಾರಿ ಜಿಲ್ಲೆಯ ಗಡಿಭಾಗದಲ್ಲಿ ೧೨ನೆಯ ಶತಮಾನದಲ್ಲಿ ಆಳುತ್ತಿದ್ದುದು ಶಾಸನಗಳು ಹೇಳುತ್ತವೆ.

ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಗುಪ್ತರು ಮಹಾಮಂಡಳೇಶ್ವರರಾಗಿದ್ದರು. ಈ ವಂಶದ ಅರಸರು ಬಳ್ಳಾರಿ ಜಿಲ್ಲೆಯ ಮೋರಿಗೆರೆ ಪರಿಸರದ ಕೆಲವು ದೇವಾಲಯಗಳಿಗೆ ದಾನ ನೀಡಿದ್ದಾರೆ. ಕುರುವತ್ತಿಯ ಕ್ರಿ.ಶ.೧೧೮೧ ಡಿಸೆಂಬರ್ ೨೫ ಶಾಸನದಲ್ಲಿ[೧೧] ಈ ವಂಶದ ವಿಕ್ರಮಾದಿತ್ಯದೇವ ಬೆಳಹುಗೆ೭೦, ಬೆಣ್ಣೆವೂರು೧೨ಗಳನ್ನು ಆಳುತ್ತಿರುವಾಗ ಇವನ ಸುಸಂಗದ ದಣ್ಣಾಯಕ ಮಹಾಮಂಡಳೇಶ್ವರರು ವಿಜಯಪಾಂಡ್ಯನ ಆಜ್ಞೆಯ ಮೇರೆಗೆ ಬೆಣ್ಣೆವೂರಿನ ಬಾಚರಸ ಮತ್ತು ಕುರುವತ್ತಿಯ ಮಹಾಜನರ ಸಮ್ಮುಖದಲ್ಲಿ೭೦ ಮತ್ತರು ಭೂಮಿಯನ್ನು ಆಹಮಲ್ಲೇಶ್ವರ ದೇವರಿಗೆ ದಾನ ನೀಡುತ್ತಾನೆ. ಬೆಣ್ಣೆವೂರು ೧೨ ಗುಪ್ತರ ಆಳ್ಚಿಕೆಗೊಳಪಟ್ಟಿದನ್ನು, ಮೇಲಿನ ಶಾಸನದಿಂದ ತಿಳಿಯಬಹುದು. ಇದರಿಂದ ಗುಪ್ತರು ಮೋರಿಗೆರೆ ಪರಿಸರವನ್ನು ಆಳ್ವಿಕೆಮಾಡಿದ್ದರು ಎಂದು ನಿರ್ಧರಿಸಬಹುದು.

## ಕದಂಬರು

'ಬನವಾಸಿ'ಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಕನ್ನಡದ ಮೊಟ್ಟಮೊದಲ ಚಕ್ರವರ್ತಿಗಳು ಕದಂಬರು, ಇವರು ಕ್ರಿ.ಶ. ೫೪೦ರವರೆಗೆ ಸುಮಾರು ಇನ್ನೂರು ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಶಿವ-ಪಾರ್ವತಿಯರಿಂದ ಜನಿಸಿದ

ಕದಂಬನೆಂಬುವವನು ಈ ವಂಶದ ಮೂಲ ಪುರುಷನೆಂದ ದಂತಕಥೆ ಹೇಳುತ್ತದೆ. ಶಾಂತಿವರ್ಮನ ಸು.ಕ್ರಿ.ಶ.೪೫೦ರ ತಾಳಗುಂದ ಶಾಸನದ ಪ್ರಕಾರ ಈ ವಂಶದ ಸ್ಥಾಪಕ ಮಯೂರ ಶರ್ಮ. ಅವನ ಮನೆಯ ಬಳಿ ಕದಂಬ ವೃಕ್ಷವಿದ್ದುದ್ದರಿಂದ ಈ ಮನೆತನಕ್ಕೆ ಕದಂಬರು ಎಂಬ ಹೆಸರು ಬಂತೆಂದು ತಿಳಿಸುತ್ತದೆ. ಅಲ್ಲದೆ ಈತನ ಗುರು ವೀರಶರ್ಮನೆಂದು ತಿಳಿಸುತ್ತದೆ. ಗುಡ್ನಾಪುರ ಶಾಸನವು ವೀರಶರ್ಮನನ್ನು ಮಯೂರನ ಅಜ್ಜನೆಂದು ಹೇಳುತ್ತದೆ. 'ರವಿವರ್ಮನ ಹಲಸಿ ತಾಮ್ರಪಟಗಳಿಂದ ಬಂಧುಕ್ಷೇಣನುಮಯೂರ ಶರ್ಮನ ತಂದೆಯೆಂದು ದೃಢಪಟ್ಟಿದೆ. ತನ್ನ ಅಜ್ಜ ಮತ್ತು ಗುರು ವೀರಶರ್ಮನ ಜೊತೆ ಮಯೂರನು ಕಂಚಿಗೆ ವಿದ್ಯಾಭ್ಯಾಸಕ್ಕಾಗಿ ಹೋಗುತ್ತಾನೆ. ಅಲ್ಲಿ ಪಲ್ಲವರ ಅಶ್ವದಳದವರಿಂದ ಅವಮಾನಿತನಾದ ಇವನು ಪಲ್ಲವರೊಡನೆ ಹೋರಾಡಿ ಜಯಗಳಿಸಿ ಪಲ್ಲವರ ಮಾಂಡಲಿಕರಾದ ಬಾಣರನ್ನು ಸೋಲಿಸುತ್ತಾನೆ. ಮುಂದೆ ಸಾಮ್ರಾಜ್ಯ ಕಟ್ಟಿ ಚಕ್ರವರ್ತಿಯಾಗುತ್ತಾನೆ.[೧೨]

ಬನವಾಸಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳುತ್ತಿದ್ದ ಕದಂಬರು ನೇರ ಆಳ್ವಿಕೆಗೆ ಬಳ್ಳಾರಿ ಜಿಲ್ಲೆಯು ಒಳಪಟ್ಟಿತ್ತು. ಇದರ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶವನ್ನು ಕದಂಬಗಳಿಗೆನಾಡು ಎಂದು ಕರೆಯಲಾಗುತ್ತಿತ್ತು. ಇದನ್ನೇ ಮುಂದೆ 'ಕದಂಬಗಳಿಗೆ ಸಾಸಿರ'ವೆಂದು ಕರೆಯಲಾಗಿದೆ. ಈ ವಿಭಾಗವು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ಮತ್ತು ಕೂಡ್ಲಿಗಿ ತಾಲೂಕುಗಳ ಕೆಲವು ಗ್ರಾಮಗಳನ್ನು, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ದಾವಣಗೆರೆ ಜಿಲ್ಲೆಯ ಜಗಳೂರು ದಾವಣಗೆರೆ ತಾಲೂಕಗಳ ಕೆಲವು ಗ್ರಾಮಗಳನ್ನೊಳಗೊಂಡಿತ್ತು. ಉಚ್ಚಂಗಿ ೩೦ ಕದಂಬಗಳಿಗೆ ಸಾಸಿರದ ಉಪ ವಿಭಾಗವಾಗಿತ್ತು. ಉಚ್ಚಂಗಿಯನ್ನು 'ಉಚ್ಚಶೃಂಗ' ವಿಷಯವೆಂದು ಕದಂಬರ ಕಾಲದಲ್ಲಿ ಕರೆಯಲಾಗುತ್ತಿತ್ತು. ಕದಂಬರಿಗೆ ಇದೊಂದು ಪ್ರಮುಖ ವಿಭಾಗವಾಗಿತ್ತು. ಕಾಕುತ್ಸವರ್ಮನ ಮಗ ಕುಮಾರವರ್ಮ ಉಚ್ಚಂಗಿ ದುರ್ಗದಲ್ಲಿದ್ದು ಆಳುತ್ತಿದ್ದನೆಂದು ಮೊರೆಸ್ ಅವರ ಅಭಿಪ್ರಾಯವಾಗಿದೆ. [೧೩]ಇವನ ನಂತರ ಮೃಗೇಶವರ್ಮನ ಸಹೋದರ ಶಿವಮಾಂಧಾತೃತವಿನ ಮಗ ಉಚ್ಚಂಗಿಯಲ್ಲಿ ಮಾಂಡಳೀಕನಾಗಿದ್ದು, ಅವನು ಚಕ್ರವರ್ತಿಯ ವಿರುದ್ದ ನಿಂತಿದ್ದುದರಿಂದ ರವಿವರ್ಮನು ತನ್ನ ಸಹೋದರ ಶಿವರಥನನ್ನು ಮಾಂಡಲೀಕನನ್ನಾಗಿ ನೇಮಿಸುತ್ತಾನೆ.

ರಾಷ್ಟ್ರಕೂಟರ ಕಾಲದಲ್ಲಿ ಬಳ್ಳಾರಿ ಜಿಲ್ಲೆಯ ಕದಂಬರು ಯಾವ ಅಧಿಕಾರವನ್ನು ಹೊಂದದೇ ಸಾಮಂತರಾಗಿ ಜೀವಿಸುತ್ತಿದ್ದುದು ಕಂಡುಬರುತ್ತದೆ. ಹರಪನಹಳ್ಳಿ ತಾಲೂಕಿನ ಕಡಬಗೆರೆಯ ಕ್ರಿ.ಶ. ೯೨೨ ಸೆಪ್ಟಂಬರ್ ೯ರ ಶಾಸನದಲ್ಲಿ[೧೪] ರಾಷ್ಟ್ರಕೂಟ ಚಕ್ರವರ್ತಿ ಇಂದ್ರಬಲ್ಲಹನು (ಮೂರನೆಯ ಇಂದ್ರ) ಆಳುತ್ತಿರುವಾಗ ಆತನ ಅಧೀನನಾಗಿ ಮಹಾಸಾಮಂತ ಬರುದರೆ ಕೊಟ್ಟ ಶ್ರೀಮಂತ ಬಿಜ್ಜನು ಕೋಗಳಿ ೫೦೦ ಮಾಸವಾಡಿ ೧೪೦ನ್ನು ಆಳುತ್ತಿರುತ್ತಾನೆ. ಕದಂಬರ ವಂಶದ ಮುದುದರ ದೇವಯ್ಯನ ಮಗ ಮಾಳಯ್ಯನು ನೊಳಂಬವಾಡಿ ಅಯ್ಯಪಯ್ಯನ ಮಗ ಅಣ್ಣಿಗನೊಂದಿಗೆ, ಪಡುಗಲ್ಲಿನಲ್ಲಿ ಹೋರಾಡಿ

ಸ್ವರ್ಗಸ್ಥನಾಗುತ್ತಾನೆ. ಇದೇ ಗ್ರಾಮದ ಇನ್ನೊಂದು ಶಾಸನದಲ್ಲಿ[೧೫] ನೊಳಂಬವಾಡಿ ಅಯ್ಯಪ್ಪಯ್ಯನ ಮಗ ಅಣ್ಣಿಗನು ಪಡುಗಲ್ಲನ್ನು ಮುತ್ತಿದಾಗ ಕದಂಬವಂಶದ ಕಣ್ಣಾವಾರ (ಮುದುದರಯ್ಯನ ಮಗ) ನಾಖ ಲೋಕ್ಯನು ಹೋರಾಡಿ ಜಯಪಡೆದು ಸ್ವರ್ಗಸ್ಥನಾಗುತ್ತಾನೆ. ಇದರಿಂದ ಕದಂಬರ ವಂಶದ ಮುದುದರಯ್ಯನಿಗೆ ಇಬ್ಬರು ಪುತ್ರರಿದ್ದು ಅವರಿಬ್ಬರೂ ಅಣ್ಣನೊಂದಿಗೆ ಹೋರಾಡಿ ಮರಣವನ್ನಪ್ಪುತ್ತಾರೆ. ಇಲ್ಲಿ ಮುದದರಯ್ಯನು ಯಾವುದೇ ಅಧಿಕಾರವಿಲ್ಲದೆ, ಸಾಮಾನ್ಯರಂತೆ ಜೀವಿಸುತ್ತಿದ್ದು, ಪರಂಪರೆಯಿಂದ 'ವೀರ' ಗುಣವನ್ನು ಮೆರೆದುದು ತಿಳಿಯುತ್ತದೆ.

ಕಣ್ಣವಾರ ಮುದುದರಯ್ಯನ ಪ್ರಶಸ್ತಿಯ ಶಾಸನದಲ್ಲಿ[೧೬], 'ಸಮಸ್ತ ಭುವನ ಭಾಸ್ಕರ ಚರಣರವಿನ್ದಯುಗಳ ಬನವಾಸಿ ಪುರಪರಮೇಶ್ವರ ಮೃಗೇನದ್ರ ಲಾಞ್ಛನಂ ವಾನರಧ್ವಜ ಅಸ್ವೇಧಾವ x x x ಸಂತರ್ಪಿತ ಚತುರಶೀತಿ ನಗರಾದಿಷ್ಠಿತ x x x x ನಾದ ನಗರಕ್ಕೆ ಭೀಮ ಬರ್ದ್ದೆಕನ್ದರ್ಪ ಭೃತ್ಯ ಚಿನ್ತಾಮಣಿನನ್ನಿ ಮೂರ್ತಣ ಕದಂಬ ವಂಶೋದ್ಭವ ಶ್ರೀಮತ್ ಕಣ್ಣಾವಾರ ಮುದುದರದೇವಯ್ಯ' ಎಂದು ಉಲ್ಲೇಖಿಸಲಾಗಿದೆ. ಈ ಪ್ರಶಸ್ತಿ ಕದಂಬ ವಂಶದ ಅರಸರು ಧರಿಸುತ್ತಿದ್ದ ಪ್ರಶಸ್ತಿ ಯಾಗಿದೆ. ಇಲ್ಲಿ ಉಲ್ಲೇಖವಾದ ಮುದುದರ ದೇವಯ್ಯ ಯಾವುದೇ ಅಧಿಕಾರ ಹೊಂದದೇ ಸಾಮಾನ್ಯರಂತೆ ಜೀವಿಸುತ್ತಿದುದು ಗೊತ್ತಾಗುತ್ತದೆ. ರಾಷ್ಟ್ರಕೂಟರ ಕಾಲದಲ್ಲಾಗಲಿ ಬಳ್ಳಾರಿ ಪ್ರದೇಶದಲ್ಲಿ ಕದಂಬರ ಶಾಖೆಯು ಸಾಮಂತರಾಗಿ ಆಳ್ವಿಕೆ ನಡೆಸಿದ್ದನ್ನು ಕಾಣಬಹುದು. ಅಂಬಳಿ ಕಲ್ಲೇಶ್ವರ ಶಾಸನ[೧೭] ದಲ್ಲಿ ಪರಿಧಾವಿ ಸಂವತ್ಸರದ ಆಶ್ವಯುಜ ಮಾಸದಲ್ಲಿ ಕದಂಬವಂಶದ ಜಗದಳಪಾಂಡ್ಯನು ೪೦೦ ಕಮ್ಮ ಭೂಮಿಯನ್ನು ಅಮ್ಮಳೆಯ ಕಲಿದೇವರಿಗೆ ಬಿಡುತ್ತಾನೆ. ಅಂಬಳಿ ಮೋರಿಗೇರಿ ಪರಿಸರದಲ್ಲಿ ಕಂಡುಬರುತ್ತದೆ.

ಕದಂಬರ ಕಾಲದಲ್ಲಿ ಕುಮಾರಸ್ವಾಮಿ ಬೆಟ್ಟದಲ್ಲಿ ಕೆಲವು ದೇವಾಲಯಗಳನ್ನು ನಿರ್ಮಿಸಿದ ಅವಶೇಷಗಳಿವೆ, ಅಲ್ಲದೆ ಕೆಲವು ಮೂರ್ತಿಶಿಲ್ಪಗಳಿವೆ. ಕೋಗಳಿ ನಾಡಿನ ಕದಂಬ ಮನೆತನದಲ್ಲಿ ಪ್ರಸಿದ್ಧ 'ಮನ್ನೆಯ' ಇವನಾಗಿದ್ದಾನೆ. ಇವನ ಕಾಲದಲ್ಲಿಯೇ 'ಮಹಾಸಾಮಂತ' ಸ್ಥಾನದಿಂದ 'ಮಹಾಮಂಡಳೇಶ್ವರ ಸ್ಥಾನಕ್ಕೆ ಏರಿಕೆಯಾಗಿದ್ದುದನ್ನು ಶಾಸನಗಳು ಹೇಳುತ್ತವೆ. ಈತನಿಗೂ ಹಾಗೂ ಆಯ್ತವರ್ಮನಿಗೂ ಇರುವ ಸಂಬಂಧ ಗೊತ್ತಾಗುದಿಲ್ಲ. ಇವನು ಆಯ್ತವರ್ಮನ ಪುತ್ರನಾಗಿರಬೇಕು. ಘಟ್ಟಿಯರಸನ ಪ್ರಥಮ ಉಲ್ಲೇಖ ಮೋರಿಗೆರೆ[೧೮] ಶಾಸನದಲ್ಲಿ ಬರುತ್ತಿದ್ದು ಅಲ್ಲಿ "ಕದಂಬರಾಭರಣಂ ಮಹಾಸಾಮಂತಂ ಮನ್ನೆಯವಲ್ಲಹ ಶ್ರೀಸಾಮಾನ್ತ ಗರುಡ ಪಾದಪಂಕಜ ಭ್ರಮರ ಕೋಗಳಿ ಆಯ್ಯಾ್ನರರ ಮನ್ನೆಯಂ ಶ್ರೀಮತ್ ಘಟ್ಟಿಯರಸ" ಎಂದು ಕರೆಯಲಾಗಿದೆ. ಮೋರಿಗೆರೆ ಪರಿಸರವು ಸಹ ಬನವಾಸಿಯ ಕದಂಬರ ಆಳ್ವಿಕೆಗೊಳಪಟ್ಟಿತ್ತೆಂಬುದನ್ನು ನಿರ್ಧರಿಸಬಹುದು.

## ಗಂಗರು

ಕರ್ನಾಟಕದ ಇತಿಹಾಸದಲ್ಲಿ ಗಂಗ ವಂಶದರಸರು ಪ್ರಮುಖವಾಗಿ ಕನ್ನಡನಾಡಿಗೆ ತಮ್ಮದೇ ಆದ ಸಾಂಸ್ಕೃತಿಕ ಕೊಡುಗೆಯನ್ನು ನೀಡಿದ್ದಾರೆ. ಈ ಗಂಗರ ಆಳ್ವಿಕೆ ಕೆಲವು ವರ್ಷಗಳಾದರೂ ಬಳ್ಳಾರಿ ಜಿಲ್ಲೆಗೆ ಒಳಪಟ್ಟಿತ್ತೆಂಬುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಕೋಗಳಿಯ[೧೯] ಕ್ರಿ.ಶ.೧೦೫೫ ಅಕ್ಟೋಬರ್ ೨೭ರ ಶಾಸನ ಗಂಗರ ದೊರೆ ದುರ್ವಿನೀತನು ಕೋಗಳಿಯಲ್ಲಿ ಬಸದಿಯೊಂದನ್ನು ನಿರ್ಮಿಸಿದ ಬಗ್ಗೆ ದೃಢಪಡಿಸುತ್ತದೆ. ಶಾಸನದಲ್ಲಿ

ಇದು ದುರ್ವ್ವಿನೀತನಿಂದಂ<br>
ಮೊದಲೊಳ್ ಬಸದಿಯಿಂದ ನಾಡಮತ್ತರ ಘಳೆಯಂ<br>
ವಿದಿತಯ ಶರಿನ್ನು ಕೀರ್ತಿಗ<br>
ಉದಿತೋದಿತಮಾಗೆ ಮಾಡಿದಕ್ಕೋಗಳಿಯೊಳ್॥

ಎಂದು ಬರೆದಿರುವುದರಿಂದ ಗಂಗರ ದೊರೆ ದುರ್ವಿನೀತನಿಂದ ಕಟ್ಟಿಸಲ್ಪಟ್ಟ ಬಸದಿಯನ್ನು ಇಂದ್ರಕೀರ್ತಿ ಮುನಿಯು ಜೀರ್ಣೋದ್ಧಾರ ಮಾಡಿದುದನ್ನು ಮೇಲಿನ ಶಾಸನ ಉಲ್ಲೇಖಿಸುತ್ತದೆ. ಈ ದುರ್ವಿನೀತನ ಕಾಲ ಕ್ರಿ.ಶ.೫೨೯–೫೭೦ ಈತನ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯ ಮೋರಿಗೇರಿ ಪರಿಸರವು ಗಂಗರ ಆಳ್ವಿಕೆಗೊಳಪಟ್ಟಿತ್ತೆಂಬುದನ್ನು ನಿರ್ಧರಿಸಬಹುದು. ಅಂಬಳಿಯ ಶಾಸನದಲ್ಲಿ[೨೦] ಗಂಗರ ದೊರೆ ದುರ್ವಿನೀತನ ಪ್ರಸ್ತಾಪ ತಿಳಿದುಬರುತ್ತದೆ.

ಧರೆಗೆಸೆದಿರ್ಪ್ಪಂ ಮೊಳೆಯಂ<br>
ಧರಣೀಪತಿ ದುರ್ವಿನೀತಗಂಗಂ ಪರಮಾ<br>
ದರದಿಂದೆ ರಾಜ್ಯ ಚಿಹ್ನಂ<br>
ಬೆರಸು ಕುಡಲ್ಪಡೆದನೆಸೆಯ ಪಶುಪತಿಭಟ್ಟಂ

ಅಂಬಳಿ ಗ್ರಾಮದ ಒಡೆಯನಾದ ಪಶುಪತಿಭಟ್ಟನೆಂಬಾತನಿಗೆ ದುರ್ವಿನೀತ ಗಂಗರು ಪರಮಾದರದಿಂದ ರಾಜ್ಯ ಚಿಹ್ನೆಗಳನ್ನು ಕೊಡುತ್ತಾನೆ. ಇದರಿಂದ ಪಶುಪತಿ ಭಟ್ಟರು ಗಂಗದೊರೆಗೆ ಯಾವುದೇ ಒಂದು ಮುಖ್ಯವಾದ ಸಾಧನೆ ಮಾಡುವಲ್ಲಿ ಸಹಾಯವಾಗಿದ್ದಾನೆ. ಇದರಿಂದ ಮೆಚ್ಚಿದ ದುರ್ವಿನೀತನು ಅವರಿಗೆ ರಾಜ್ಯ ಚಿಹ್ನೆಗಳನ್ನು ನೀಡಿ ಗೌರವಿಸಿದ್ದಾನೆ. ಇವುಗಳ ಆಧಾರದಿಂದ ಗಂಗರ ದೊರೆ ದುರ್ವಿನೀತನ ಆಳ್ವಿಕೆಗೆ ಬಳ್ಳಾರಿ ಜಿಲ್ಲೆಯ ಮೋರಿಗೆರೆ ಪ್ರದೇಶವು ಒಳಪಟ್ಟಿತ್ತೆಂಬುದನ್ನು ಊಹಿಸಬಹುದು.

## ಬಾದಾಮಿ ಚಾಲುಕ್ಯರು

'ವಾತಾಪಿ'ಯ ಇನ್ನೊಂದು ಹೆಸರು ಬಾದಾಮಿ, ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡಿದ ಚಾಲುಕ್ಯರು, ಬಾದಾಮಿ ಚಾಲುಕ್ಯರಾದರು, ಇವರು ತಮ್ಮ ನಾಡಿನ ಗಡಿಯನ್ನು ಉತ್ತರದಲ್ಲಿ ನರ್ಮದೆಯಿಂದ ಹಿಡಿದು ದಕ್ಷಿಣದಲ್ಲಿ ಕಾವೇರಿಯವರೆಗೂ ವಿಸ್ತರಿಸಿದರು. ಕದಂಬರ ಕೃಷ್ಣವರ್ಮನನ್ನು ಕ್ರಿ.ಶ.೫೪೦ರಲ್ಲಿ ಆತನ ಮಾಂಡಲೀಕನಾದ ಚಾಲುಕ್ಯ ಒಂದನೆಯ ಪುಲಕೇಶಿಯು ಸೋಲಿಸಿ ಕ್ರಿ.ಶ. ೫೪೩–೪೪ರಲ್ಲಿ ಅಶ್ವಮೇಧಯಾಗ ಮಾಡಿ ಚಕ್ರವರ್ತಿಯೆನಿಸಿದ ಹೀಗೆ ಚಾಲುಕ್ಯ ಸಾಮ್ರಾಜ್ಯದ ಅಧಿಕಾರ ಸ್ಥಾಪನೆ ಆರಂಭವಾಯಿತು. ಇವರ ಆಳ್ವಿಕೆಗೆ ಬಳ್ಳಾರಿ ಜಿಲ್ಲೆಯೂ ಒಳಪಟ್ಟಿದ್ದು, ಈ ವಂಶದ ಚಕ್ರವರ್ತಿಗಳ ಕೆಲವು ಶಾಸನಗಳು ಈ ಪ್ರದೇಶದಲ್ಲಿ ಲಭ್ಯವಾಗಿವೆ. ಬಾದಾಮಿ ಚಾಲುಕ್ಯರಲ್ಲಿ ಪ್ರಸಿದ್ಧನಾದ ಇಮ್ಮಡಿ ಪುಲಕೇಶಿಯು ಬಾಣ ದೊರೆ ರಣವಿಕ್ರಮನನ್ನು ಸೋಲಿಸಿ 'ಎಳ್ಪತ್ತು ಸಿಂಭಿಗೆ, ನಾಡನೂರ' ಗ್ರಾಮಗಳನ್ನು ಮಹಾಜನರಿಗೆ ದಾನ ಕೊಟ್ಟಿದ್ದು, ಗುತ್ತಿ ತಾಲೂಕಿನ ಪೆದ್ದವಡಗೂರು ಶಾಸನದಲ್ಲಿ[೨೧] ಈ ರೀತಿಯಾಗಿ ಉಲ್ಲೇಖವಾಗಿದೆ. "ಸ್ವಸ್ತಿ ಸತ್ಯಾಶ್ರಯ ಶ್ರೀ ಪೃಥವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾರಕ ದತ್ತ ನಾಡನೋರೊಳಗಣ ವಿಕ್ರಮನಾನ್ಕೆರೆಲೆಯಡಿಗಾಳೆಳ್ಪತ್ತು ಸಿಂಭಿಗೆ ಕೊಳ್ಗೋಳದುಳ್ಳೀರೆ ಎರದು ಗೆಲ್ದು ಅಲ್ಲಿ ಮಹಾಜನಮಾನ್ಕರೆದುನಿಗಳ ಬಾವ್ವಿನ್ತು ಜೀವಿತಂ ಬೇಡಿಕೊಳ್ಳಿಮೆಂದೊಡೆ".

ಬಳ್ಳಾರಿ ತಾಲೂಕಿನ ಕುರುಗೋಡು ಶಾಸನದಲ್ಲಿ[೨೨] ಕುರುಗೋಡಿನ ಮಹಾಜನರು ಚಾಲುಕ್ಯರಾಜ ಸತ್ಯಾಶ್ರಯನಿಂದ ದತ್ತಿ ಪಡೆದುದನ್ನು ಈ ರೀತಿಯಾಗಿ "ಸ್ವಸ್ತಿ ಶ್ರೀ ಸತ್ತಾಶ್ರಯ ದತ್ತಿಯ ಪಡೆದಕು ಮಿಂಗೋಡ ವ್ಯವಸ್ಥೆ ಎನ್ತೆನೊಡೆ ಪದಿನೆಣ್ಬುಗೇಣ ೧೮ ಕೋಲು ಪೊನ್ನು ನವಿಲು ಪೊನ್ನು" ಎಂದು ಉಲ್ಲೇಖಿಸುತ್ತದೆ.

ಚಾಲುಕ್ಯ ಅಭಿನವಾದಿತ್ಯನು ಕುಪ್ಪಶರ್ಮನೆಂಬ ಬ್ರಾಹ್ಮಣನಿಗೆ ಉಚ್ಚಶೃಂಗ ಪ್ರದೇಶದ ನೆಲ್ಕುಂದ ಗ್ರಾಮವನ್ನು ದಾನ ಬಿಡುತ್ತಾನೆ. ಈ ದಾನ ಶಾಸನದಲ್ಲಿ[೨೩] ಉತ್ತರಾ ಪಥದ ಸಾಮ್ರಾಟನಾದ ಶ್ರೀ ಹರ್ಷವರ್ಧನನ್ನು ಪರಾಜಯಗೊಳಿಸಿ ತನ್ಮೂಲಕ ಪರಮೇಶ್ವರ ಎಂಬ ಬಿರುದನ್ನು ಧರಿಸಿದ ಶ್ರೀ ಸತ್ಯಾಶ್ರಯ ಪೃಥವೀ ವಲ್ಲಭ ಮಹಾರಾಧಿರಾಜ ಪರಮೇಶ್ವರನಪೌತ್ರನಾದ ಶ್ರೀ ಆದಿತ್ಯ ವರ್ಮ ಮಹಾರಾಜಾಧಿರಾಜ ಪರಮೇಶ್ವರನ ಪುತ್ರರಾದ ನಯವಿನಯ ಪೂಜ್ಯಗುಣಗಳಿಂದ ಸಂಪನ್ನನಾದ ಪನ್ನಗಪತಿಯ ಹೆಡೆಗಳಿಗೆ ಸದೃಶವಾದ ಭುಜಾದಂಡಗಳನ್ನುಳ್ಳ ಅಭಿನವಾದಿತ್ಯನೆಂಬ ಮತ್ತೊಂದು ಹೆಸರುಳ್ಳ ಶ್ರೀ ಸತ್ಯಾಶ್ರಯ ಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರನು ಎಲ್ಲರಿಗೂ ಹೀಗೆ ಆಜ್ಞೆ ಮಾಡುತ್ತಿದ್ದಾನೆ ಎಂಬ ಐತಿಹಾಸಿಕ ಘಟನೆಗಳನ್ನು ಉಲ್ಲೇಖಿಸಿದೆ.

ಬಾದಾಮಿ ಚಾಲುಕ್ಯರ ಕಾಲದ ಕೆಲವು ಮೂರ್ತಿ ಶಿಲ್ಪಗಳು, ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳಲ್ಲಿ ಕಂಡುಬರುತ್ತವೆ. ಇವರ ಕಾಲದ ಬಾದಾಮಿಯ ಗುಹೆ ಪ್ರವೇಶದಲ್ಲಿ ಕಾರ್ತಿಕೇಯನ ಉಬ್ಬುಶಿಲ್ಪ ಮತ್ತು ಐಹೊಳೆಯ ಹುಚ್ಚಮಲ್ಲಿ ದೇವಾಲಯದ ಮುಖಮಂಟಪದ ಭುವನೇಶ್ವರಿಯ ಭಾಗದಲ್ಲಿ ನವಿಲು ವಾಹನನಾದ ಕಾರ್ತಿಕೇಯನು ಶತ್ರುಗಳನ್ನು ಸಂಹರಿಸುತ್ತಿರುವ ಶಿಲ್ಪವಿದೆ. ಅದೇ ರೀತಿಯಾಗಿ ಸಂಡೂರಿನ ಕುಮಾರಸ್ವಾಮಿ ದೇವಾಲಯದ ಪಕ್ಕದಲ್ಲಿರುವ ಪಾರ್ವತಿ ದೇವಾಲಯ ಬಾದಾಮಿ ಚಾಲುಕ್ಯರ ಉತ್ತರಾರ್ಧದಲ್ಲಿ ನಿರ್ಮಾಣವಾಗಿದೆ.[೨೪] ಆದ್ದರಿಂದ ಮೋರಿಗೆರೆ ಪರಿಸರವು ಸಹ ಬಾದಾಮಿ ಚಾಲುಕ್ಯರ ಆಡಳಿತಕ್ಕೊಳಪಟ್ಟಿತ್ತೆಂಬುದನ್ನು ತಿಳಿಯಬಹುದು.

ಮೋರಿಗೇರಿ ಪರಿಸರದಲ್ಲಿ ಕಂಡುಬರುವ ಹನಶಿ - ರಾಮೇಶ್ವರ ದೇವಾಲಯದಲ್ಲಿರುವ ಶಾಸನ[೨೫]ದಲ್ಲಿ ಚಾಳುಕ್ಯ ವಿಕ್ರಮವರ್ಷ ೩೫-ಶ್ರಾವಣ, ಶು. ೫. ಸೋಮವಾರಕ್ಕೆ ಸರಿಯಾದ ಕ್ರಿ.ಶ.೧೨-೭-೧೧೧೧ ಸೋಮವಾರ ಚಾಳುಕ್ಯ ತ್ರಿಭುವನಮಲ್ಲನ ಸಾಮಂತನಾದ ತ್ರಿಭುವನಮಲ್ಲಪಾಂಡ್ಯ ದೇವನು ನೊಳಂಬವಾಡಿ-೩೨೦೦ ವನ್ನು ಆಳುತ್ತಿದ್ದಾಗ, ಇವನ ಸಾಮಂತನಾದ ಹೊಳ್ಳೆಯನು ಕೋಗಳಿ-೫೦೦ ರ ಹನಸಿಯ ಪರಶುರಾಮೇಶ್ವರ ದೇವರಿಗೆ ಚಿಕ್ಕಲಚ್ಚಿಗೆಯನ್ನು ಸೋಮಕರ್ತಾರ್ಥ ಪಂಡಿತರ ಕಾಲನ್ನು ತೊಳೆದು ದಾನ ನೀಡುತ್ತಾನೆ. ಈ ಶಾಸನವನ್ನು ಬರೆದವನು ಸೇನಬೋವ ಸೋಮನಾಥಯ್ಯ. ಶಾಸನ ಕೆತ್ತಿದವನು ಕಂಚುಗಾರದಾಸೋಜ ಎಂದು ತಿಳಿದುಬರುತ್ತದೆ. ಚಾಳುಕ್ಯ ವಿಕ್ರಮವರ್ಷ ೩೦ ನೆಯ ಪಾರ್ಥಿವ, ಪುಷ್ಯ, ಅಮವಾಸ್ಯೆ, ಸೋಮವಾರ, ಉತ್ತರಾಯಣ ಸಂಕ್ರಾಂತಿ, ಅಂದರೆ ಕ್ರಿ.ಶ. ೭-೧-೧೧೦೬ ಭಾನುವಾರದಂದು ಚಾಳುಕ್ಯ ತ್ರಿಭುವನಮಲ್ಲನ ಕಾಲದಲ್ಲಿ ನೊಳಂಬವಾಡಿ -೩೨೦೦ ರಿಂದ ಹೆಜ್ಜುಂಕದ ಅಧಿಕಾರಿಯಾಗಿದ್ದ ಅಣುಕಪಲ್ಲವರಾಯನ ಅನುಮತಿಯಂತೆ ಕಾಳಿಮರಸ ಮತ್ತು ಕೇಶಿರಾಜರು ಅಮ್ಮಳೆಯ ೫೦ ಮಹಾಜನರ ಕಾಲನ್ನು ತೊಳೆದು ಹಿರಿಯಕೆರೆಯ[೨೬] ಜೀರ್ಣೋದ್ಧಾರಕ್ಕಾಗಿ ಎಲೆಯ ಹೇರನೆಮೇಲಿನ ಸುಂಕವನ್ನು ಬಿಡುತ್ತಾರೆ ಹಾಗೂ ಭೂದಾನವನ್ನೂ ನೀಡುತ್ತಾರೆ ಎಂದುತಿಳಿದುಬರುತ್ತದೆ.

ಕೋಗಳಿ ಗ್ರಾಮದ ಚಾವಡಿ ಬಳಿ ಇರುವ ವೀರಗಲ್ಲು-ಶಕ ೯೬೯ ನೆಯ ಸರ್ವಜಿತ್, ಶ್ರಾ ಶು.ಭಿ. ಆದಿತ್ಯವಾರ ಅಂದರೆ ಈ ವರ್ಷ ಆಧಿಕ ಶ್ರಾವಣ ಬಂದಿದ್ದು ಶ್ರಾವಣ, ಶುದ್ಧ-೫ ಯಾವ ಮಾಸವೆಂದು ತಿಳಿಯುವುದಿಲ್ಲ. ಮೇಲ್ಕಾಣಿಸಿದ ತಿಥಿಯು ಭಾನುವಾರ ಬರುವುದಿಲ್ಲ. ಹೀಗಾಗಿ ಜೂನ್-ಜುಲೈ ೧೦೪೭ ಎಂದು ಹೇಳಬಹುದಾಗಿದೆ. ಚಾಳುಕ್ಯ[೨೭] ದೊರೆ ತ್ರೈಲೋಕ್ಯಮಲ್ಲನ ಸಾಮಂತ ತ್ರೈಲೋಕ್ಯಮಲ್ಲನನ್ನಿನೊಳಂಬ ಪಲ್ಲವ ಪೆರ್ಮಾನಡಿ ಕಾಲದಲ್ಲಿ ಉದಯಾದಿತ್ಯ ಐಚನಾಯಕನು ಘಟ್ಟಿದೇವನ ಆಜ್ಞೆಯಂತೆ ಕುದುರೆ ಏರಿಹೋಗಿ ಹಸುಗಳನ್ನು ಕದ್ದೊಯ್ಯುತ್ತಿದ್ದ ಕಳ್ಳರನ್ನು ಸದೆಬಡೆದು ಕೋಗಳಿಯ

ಹಸುಗಳನ್ನು ಹಿಂತಿರುಗಿಸಿ ತಾನುಸತ್ತನು. ಎಂದು ಮೋರಿಗೇರಿ ಪರಿಸರದಲ್ಲಿ ಬರುವ ಶಾಸನಗಳು ಬಾದಾಮಿ ಚಾಲುಕ್ಯರ ಆಡಳಿತದ ಬಗ್ಗೆ ತಿಳಿಸುತ್ತವೆ. ಕೋಗಳಿ ಊರಿನ ಬಸದಿಯ ಎದುರಗಡೆಯ ಶಾಸನ[೩೮] ಶಕ ೯೭೭ ನೆಯ ಮನ್ಮಥ, ಕಾರ್ತೀಕ, ಶುಭ, ಆದಿತ್ಯವಾರಕ್ಕೆ ಸರಿಯಾದ ಕ್ರಿ. ಶ. ೨೭-೧೦-೧೦೫೫ ಶುಕ್ರವಾರ ದಂದು ಚಾಲುಕ್ಯ ಅರಸ ತ್ರೈಲೋಕ್ಯ ಮಲ್ಲನ ಆಳ್ವಿಕೆಯಲ್ಲಿ ಇಂದ್ರಕೀರ್ತಿ ಮುನೀಂದ್ರನು ಕೋಗಳಿಯಲ್ಲಿ ದುರ್ವಿನೀತನಿಂದ ರಚಿತವಾಗಿದ್ದ ಬಸದಿಗೆ ಕೋಗಳಿ ನಾಡಿಗೆ ಸೇರಿದ ಇಟ್ಟಿಗೆಯಲ್ಲಿ ೨೪ ಮತ್ತರು ಭೂಮಿಯನ್ನು ದಾನ ನೀಡುತ್ತಾನೆ. ಎಂಬ ಉಲ್ಲೇಖ ಕಂಡುಬರುತ್ತದೆ.

## ರಾಷ್ಟ್ರಕೂಟರು

ಬಾದಾಮಿ ಚಾಲುಕ್ಯರ ಮಾಂಡಳಿಕನಾದ ರಾಷ್ಟ್ರಕೂಟ ವಂಶದ ದಂತಿದುರ್ಗನು ಕ್ರಿ.ಶ. ೭೫೩ ರಲ್ಲಿ ತನ್ನ ಚಕ್ರವರ್ತಿಯಾದ, ಬಾದಾಮಿ ಚಾಲುಕ್ಯ ವಂಶದ ಕೀರ್ತಿವರ್ಮನನ್ನು ಸೋಲಿಸಿ ರಾಷ್ಟ್ರಕೂಟ ವಂಶವನ್ನು ಪ್ರತಿಷ್ಠಾಪಿಸುತ್ತಾನೆ. ಈತನ ನಂತರ ಅಧಿಕಾರಕ್ಕೆ ಬಂದ ಇವನ ಚಿಕ್ಕಪ್ಪನಾದ ಕೃಷ್ಣನು ಚಾಲುಕ್ಯರ ೨ನೆಯ ಕೀರ್ತಿವರ್ಮನನ್ನು ಸಂಪೂರ್ಣವಾಗಿ ಸೋಲಿಸಿದುದರಿಂದ ರಾಷ್ಟ್ರಕೂಟರ ಸಾಮ್ರಾಜ್ಯದ ಶಕ್ತಿ ಗಟ್ಟಿಯಾಗಿ ಸಾಮ್ರಾಜ್ಯ ವಿಸ್ತಾರವಾಗುತ್ತದೆ. ಈ ವಂಶದ ಅರಸರು ಬಳ್ಳಾರಿ ಜಿಲ್ಲೆಯ ಮೋರಿಗೆರೆ ಪರಿಸರದ ದೇವಾಲಯಗಳಿಗೆ ದಾನ ನೀಡಿರುವುದನ್ನು ಗಮನಿಸಿದಾಗ ಮೋರಿಗೆರೆ ಪರಿಸರ ರಾಷ್ಟ್ರಕೂಟರ ಆಳ್ವಿಕೆಗೊಳಪಟ್ಟಿತೆಂಬುದನ್ನು ಇಲ್ಲಿ ದೊರೆತ ಹಲವಾರು ಶಾಸನಗಳಿಂದ ತಿಳಿಯುತ್ತದೆ.

ಕೊಳಗಲ್ಲು ಶಾಸನದಲ್ಲಿ[೩೯] ಅಕಾಲವರ್ಷನು ಆಳುತ್ತಿದ್ದುದನ್ನು "ಸ್ವಸ್ತ್ಯಕಾಳ ವರ್ಷದೇವ ಶ್ರೀ ಪೃಥ್ವೀವಲ್ಲಭ ಮಹಾರಾಜಧಿರಾಜ ಪರಮೇಶ್ವರ ಪರಮಭಟ್ಟಾರಕ ಶ್ರೀ ಮಚ್ಚಲಕ್ಕೆನಲ್ಲಾತನ ರಾಜ್ಯಂ ಪ್ರವರ್ಧಮಾನಂ ಸಲ್ಲುತ್ತಿರೆ" ಎಂದು ಹೇಳುತ್ತಾ, ಅಕಾಲ ವರ್ಷನ ಕಾಲದಲ್ಲಿ ಅಯ್ಯಗಾವುಂಡನ ತಮ್ಮ ಚಂಗಗಾವುಂಡನು ೩೦ ಮತ್ತರು ಭೂಮಿಯನ್ನು ವಿದ್ಯಾದಾನದ ಸತ್ರಕ್ಕಾಗಿ, ಕೊಳ್ಗಲ ಅಧಿಪತಿ ಕಾರ್ತಿಕೇಯ ತಪೋವನದ ಅಧಿಪತಿಯಾದ ಗಜಾಧರಯ್ಯನ ಸಮಕ್ಷಮದಲ್ಲಿ ಸತ್ಯರಾಸಿಭಟಾರರ ಕಾಲನ್ನು ತೊಳೆದು ಭೂಮಿದಾನಮಾಡಿದ ಉಲ್ಲೇಖ ಬರುತ್ತದೆ.

ಕೋಗಳಿ ಶಾಸನದಲ್ಲಿ[೪೦] ತ್ರುಟಿತ. ಶಕ೮೩೦ನೆಯ ವಿಭವ ಸಂವತ್ಸರ (ಕ್ರಿ.ಶ ೯೦೮-೦೯)ದಲ್ಲಿ ರಾಷ್ಟ್ರಕೂಟ ಅರಸನ ಕಾಲದಲ್ಲಿ ಹೆಗ್ಗಡೆತೊಮ್ಮನೆಂಬುವನುಕಾದಿಸತ್ತ. ಅವನ ಹೆಂಡತಿ ಬಳಕ್ಕ ಈ ಶಾಸನವನ್ನು ನಿಲ್ಲಿಸಿದಳು.

ಇಮ್ಮಡಿ ಕೃಷ್ಣನು ಸಂಡೂರಿನ ಸಮೀಪವಿರುವ ಕುಮಾರಸ್ವಾಮಿ ದೇವರಿಗೆ ದತ್ತಿಕೊಟ್ಟಿರುವ ಸಂಗತಿಯಿದೆ. [೪೧]

'ಇಂದರ ಬಲ್ಲಹ' ಆಳುತ್ತಿದ್ದುದನ್ನು ಕಡಬಗೆರೆ ಶಾಸನ [೩೨] ತಿಳಿಸುತ್ತದೆ. ಬಾಗಳಿ ಶಾಸನವು[೩೩] ಇಂದರ ಬಲ್ಲಹನ ಅಧೀನವಾಗಿ ರಟ್ಟಕಂದರ್ಪನೆನಿಸಿದ್ದ 'ಬಿರುದರ ರುಟ್ಟ' ಕೋಗಳಿ ೫೦೦ಮಾಸಿಯವಾಡಿ ೧೪೦ನ್ನು ಆಳುತ್ತಿದ್ದನ್ನು ಹೇಳುತ್ತದೆ. ನಾಲ್ಕನೆಯ ಗೋವಿಂದನು ಆಳ್ವಿಕೆಮಾಡುತ್ತಿದ್ದುದನ್ನು ದೊಡ್ಡಿಮಾಕಳ[೩೪] ಚಿರಸ್ತಹಳ್ಳಿ [೩೫] ಶಾಸನಗಳು ಉಲ್ಲೇಖಿಸುತ್ತವೆ.

ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ ಶಾಸನಗಳು ಬಳ್ಳಾರಿ ಜಿಲ್ಲೆಯ ಹಾಗೂ ಮೋರಿಗೆರೆ ಪರಿಸರದ, ಸಂಡೂರು, ಕೊಳಗಲ್ಲು, ಕೋಗಳಿ, ಕಡಬಗೆರೆ, ಚಿರಸ್ತಹಳ್ಳಿ ಮುಂತಾದ ಗ್ರಾಮಗಳಲ್ಲಿ ದೊರೆತಿರುವುದರಿಂದ ಈ ಪ್ರದೇಶವು ರಾಷ್ಟ್ರಕೂಟರ ಆಡಳಿತಕ್ಕೆ ಸಂಬಂಧಪಟ್ಟಿದೆ ಎನ್ನುವುದನ್ನು ನಿರ್ಧರಿಸಬಹುದು.

## ಕಲ್ಯಾಣಿ ಚಾಲುಕ್ಯರು

ಕಲ್ಯಾಣ ಚಾಲುಕ್ಯರ ಇತಿಹಾಸವು ಕರ್ನಾಟಕದ ಇತಿಹಾಸ ಅಧ್ಯಯನದಲ್ಲಿ ಮುಖ್ಯವಾದುದಾಗಿದೆ. ಈ ವಂಶದವರು 'ಕಲ್ಯಾಣ'ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡಿದ್ದರಿಂದ ಕಲ್ಯಾಣಿ ಚಾಲುಕ್ಯರಾದರು. ಈ ವಂಶದ ಅರಸರು ಬಳ್ಳಾರಿ ಜಿಲ್ಲೆಯ ಮೋರಿಗೆರೆ ಪ್ರದೇಶಕ್ಕೆ ಸಂಬಂಧಿಸಿದಂತೆ ಅನೇಕ ದೇವಾಲಯ ಹಾಗೂ ಮಠ ಮಾನ್ಯಗಳಿಗೆ ದಾನ ನೀಡಿದ ಉಲ್ಲೇಖಗಳು ಸಿಗುತ್ತವೆ.

ಮೋರಿಗೆರೆ ಶಾಸನದಲ್ಲಿ[೩೬] ಚಾಳುಕ್ಯ ತ್ರೈಳೋಕ್ಯಮಲ್ಲ, ಅಹಮಲ್ಲದೇವನು ರಾಜ್ಯಭಾರ ಮಾಡುತ್ತಿದ್ದಾಗ, ಇವನ ಸಾಮಂತನೊಳಂಬ ಘಟೆಯಂಕಕಾರನ ಮಗ ಉದಯಾದಿತ್ಯನಿಗೆ ಪರೋಕ್ಷ ವಿನಯವಾಗಿ೨೪ ಜನರಿಗೆ ಛತ್ರವನ್ನು ನೊಳಂಬೇಶ್ವರ ಮತ್ತು ಲೆಂಕೇಶ್ವರವನ್ನುಮಾಡಿಸಿ, ಅವುಗಳ ಪೂಜೆಗೆ ಹಾಗೂ ವಿದ್ಯಾದಾನಕ್ಕೆ ಅರಸನಿಂದ ಸವಂಟಿಯಪಾಳನ್ನು ಪಡೆದು ಅದಕ್ಕೆ ಶಿವಪುರವೆಂದು ಹೆಸರಿಟ್ಟರು.

ಮೋರಗೆರೆಯ ಇನ್ನೊಂದು ಶಾಸನದಲ್ಲಿ[೩೭] ಕಲ್ಯಾಣದ ಚಾಳುಕ್ಯ ಅರಸ ತ್ರೇಳೋಕ್ಯಮಲ್ಲದೇವನು ಆಳುತ್ತಿದ್ದಾಗ. ಇವನ ಸಾಮಂತನಾದ ತ್ರೇಳೋಕ್ಯಮಲ್ಲ ನನ್ನಿನೊಳಂಬಪಲ್ಲವ ಪೆರ್ಮಾನಡಿಯು ಬಲ್ಲಕುನ್ದೆ೩೦೦, ಕೋಗಳಿ-೫೦೦, ಕದಂಬಗಳಿಗೆ೧೦೦೦, ಕುದಿಯಹರವಿ-೭೦, ಕರಿವಿಡಿ-೩೫ ಗ್ರಾಮಗಳು, ನೊಳಂಬವಾಡಿ-೩೨೦೦ವನ್ನು ಆಳುತ್ತಿದ್ದಾಗ, ಇವನ ದಂಡನಾಯಕ ತಿಕಣ್ಣನೇ ಮೊದಲಾಗಿ ಲೆಂಕಸಾರ್ಸಿವರು ಅರ್ಮ್ಮಳೆ, ನೆಲ್ಕುದುರೆ, ಸೊನ್ನ, ಪೊಳಲ್ಲುನ್ದೆ, ಸೂಗೂರು, ಮೋರಂಗೇರೆಯನ್ನು ಬಲ್ಲವರಸನ ಕೈಲಿಪಡೆದು ನೊಳೆಂಬೇಶ್ವರದೇವರಿಗೆ ವಿದ್ಯಾಭ್ಯಾಸಕ್ಕಾಗಿ ಪಾದಮೂಲ ಪರಿವಾರ ಮುಂತಾದವಕ್ಕೆ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು, ವಿರುಪಾಕ್ಷದೇವರ ಸಮಕ್ಷಮದಲ್ಲಿ ದಾನ ನೀಡುತ್ತಾರೆ.

ಕ್ರಿ.ಶ.೧೦೯೯ರ ಶಾಸನವು[೩೮] ಚಾಳುಕ್ಯ ಚಕ್ರವರ್ತಿ ತ್ರಿಭುವನಮಲ್ಲದೇವನ ಕಾಲದಲ್ಲಿ ಭಗವತೀದೇವಿಗೆ ಕೊಡುವ ಮುನ್ನ ಪರಮೇಶ್ವರ ದೇವರಿಗೆ ದತ್ತಿಯಾಗಿ ಬಿಟ್ಟ ಭೂಮಿಯನ್ನು ದಾನವಾಗಿ ಕೊಡಲಾಗಿದೆ. ಈ ದಾನವನ್ನು ವಿಶ್ವರೂಪ ಬ್ರಹ್ಮಚಾರಿ ಹಾಗೂ ಸ್ಥಾನದಯ್ಯವರ್ಗದವರ ಸಮ್ಮುಖದಲ್ಲಿ ನೀಡಲಾಯಿತು. ಎನ್ನುವ ಉಲ್ಲೇಖ ಬಂದಿದೆ.

ಕ್ರಿ.ಶ.೧೧೪೮ರ ಶಾಸನದಲ್ಲಿ[೩೯] ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನು ಕಲ್ಯಾಣದಿಂದ ಆಳುತ್ತಿರುವ ಕಾಲದಲ್ಲಿ ಮಲ್ಲರಸನು ಸ್ವಾಮಿಯಾತ್ರೆಗೆ ಬರುವ ಕಪ್ಪಡಿಗಳ ಸತ್ರಕ್ಕೆ ಭೂಮಿಯನ್ನು ಮಾಧವ ಬ್ರಹ್ಮಾಚಾರಿ ಮತ್ತು ಸ್ಥಾನಯ್ಯವರ್ಗದವರ ಸಮ್ಮುಖದಲ್ಲಿ ದಾನನೀಡಿದ ಉಲ್ಲೇಖವಿದೆ.

ಕ್ರಿ.ಶ.೧೦೫೦ರ ಶಾಸನವು[೪೦] ಜಸನಬ್ಬೆ ಎಂಬುವಳು ತಪೋವನದ ಅಧಿಕಾರಿ ಶ್ರೀಮದ್ ದಂಡಸಾನಿ ಮತ್ತು ಊರಿನ ಐದು ವರ್ಗದವರ ಸಮ್ಮುಖದಲ್ಲಿ ಸೋಮೇಶ್ವರ ದೇವರಿಗೆ ಭೂಮಿದಾನ ನೀಡಿದ ಉಲ್ಲೇಖವಿದೆ.

ಕ್ರಿ.ಶ.೧೦೯೯ರ ಮುದನೂರು (ಸುರಪುರ ತಾ. ಗುಲ್ಬರ್ಗಾ ಜಿಲ್ಲೆ) ಗ್ರಾಮದ ಶಾಸನದಲ್ಲಿ[೪೧] ಕಲ್ಯಾಣ ಚಾಲುಕ್ಯರ ಅರಸ ಆರನೆಯ ವಿಕ್ರಮಾಧಿತ್ಯನು ಮೂದನೂರು ಊರೊಡೆಯದೇ ಪ್ರಮುಖವಾಗಿ ಐನೂರು, ಮಹಾಜನರು, ಕುಮಾರಸ್ವಾಮಿ ದಂಡನಾಯಕ ಪ್ರತಿಷ್ಠಾಪಿಸಿದ ಕುಮಾರಸ್ವಾಮಿ ದೇವರಿಗೆ ಜೀರ್ಣೋದ್ಧಾರ ಕಾರ್ಯಗಳು ನಿರಂತರವಾಗಿ ನಡೆಯಲು ದಾನ ಬಿಟ್ಟ ಉಲ್ಲೇಖಗಳಿವೆ. ಇದರಿಂದ ಮೋರಿಗೆರಿ ಪ್ರದೇಶವು ಕಲ್ಯಾಣಿ ಚಾಲುಕ್ಯರ ಕಾಲದ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದನ್ನು ದೊರೆತ ಆಧಾರಗಳಿಂದ ದೃಡಪಡುವುದು.

## ಹೊಯ್ಸಳರು

ಕಲ್ಯಾಣಿ ಚಾಲುಕ್ಯರ ನಂತರ ಅಧಿಕಾರಕ್ಕೆ ಬಂದ ಹೊಯ್ಸಳರು ದ್ವಾರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಇವರು ಸು. ಕ್ರಿ.ಶ.೧೧೩೫ರಲ್ಲಿ ಉಚ್ಚಂಗಿದುರ್ಗವನ್ನು ಮುತ್ತಿಗೆ ಹಾಕಿ ನೊಳಂಬವಾಡಿ ೩೨೦೦ವನ್ನು ವಶಪಡಿಸಿಕೊಂಡು, ತುಂಗಾಭದ್ರ ನದಿ ದಂಡೆಯವರೆಗೂ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರು.

ಮೋರಿಗೇರಿ ಪರಿಸರದಲ್ಲಿ ಬರುವ ಬೆಣಕಲ್ಲು ದೇವಾಲಯದ ಶಾಸನದಲ್ಲಿ[೪೨] ಹೊಯ್ಸಳ ಅರಸ ವೀರನರಸಿಂಹದೇವನ ಕಾಲದಲ್ಲಿ ವಾಮರಸನ ಮಗನಾದ ಮಹಾ ಪ್ರಧಾನ ಆಮಿತಯ್ಯ ದಂಡನಾಯಕನು ನೊಳಂಬವಾಡಿ ನಾಡಿನ ಕೋಗಳಿ-೫೦೦ರ ಬೆಣಕಲ್ಲು-೧೨ರ ಮುಖ್ಯಪಟ್ಟಣವಾದ ಬೆಣ್ಣೆಕಲ್ಲಿನಲ್ಲಿ ಪದ್ಮಲೇಶ್ವರ, ಅಮೃತೇಶ್ವರ, ಲಕ್ಷ್ಮೀನಾರಯಣ, ವಾಮೇಶ್ವರ, ಬಲ್ಲಾಳೇಶ್ವರ, ನರಸಿಂಹದೇವರ ದೇವಾಲಯಗಳನ್ನು ಕಟ್ಟಿಸಿ ಅವುಗಳ ನಿತ್ಯ ನೈಮಿತ್ಯಕಕ್ಕೆ ಬೆಣ್ಣೆಕಲ್ಲಿನಲ್ಲಿ ವಜ್ರೇಶ್ವರ ಮತ್ತು ಸೋಮನಾಥ ದೇವರ ಸನ್ನಧಿಯಲ್ಲಿ ರಾಜಗುರು ಖಳೇಶ್ವರ ದೇವನ ಕಾಲನ್ನು ತೊಳೆದು ದಾನ ನೀಡುತ್ತಾನೆ. ಎನ್ನುವ ಉಲ್ಲೇಖವಿದೆ.

ಕೋಗಳಿ ಕಲ್ಲೇಶ್ವರ ದೇವಾಲಯದ ಶಾಸನದಲ್ಲಿ[೪೩] ಹೊಯ್ಸಳ ವೀರನರಸಿಂಹದೇವನ ಸೋಮನ ದಂಡನಾಯಕನು ಮಹಾ ಪ್ರಧಾನಿಯಾಗಿದ್ದಾಗ ಸೋಮನಾಥದೇವರ ಪೂಜೆಗಾಗಿ ಭೂದಾನ ನೀಡಿದ ಉಲ್ಲೆಖವಿದೆ.

ವೀರ ಬಲ್ಲಾಳನು ದೇವಗಿರಿಯ ಯಾದವರೊಂದಿಗೆ(ಸೇವುಣರು) ಯುದ್ಧಮಾಡಿ ವಿಜಯಸಾಧಿಸಿದ್ದನ್ನು ನೀಲಗುಂದದ ಕ್ರಿ.ಶ.೧೨೨೪ರ ಶಾಸನದಲ್ಲಿ[೪೪] ಈ ರೀತಿಯಾಗಿ ಪ್ರಸ್ತಾಪಿಸಲಾಗಿದೆ.

ಎರಡುಂ ಲಕ್ಕಂಬರಂ ಸುತ್ತಣಯಾರಸನಿ ಸಂನಾಹದಿಂಪಂನೆರಡು ಸಾವಿರ
ವರುಶ ಶ್ರೇಣಿ ಪೊಲಂ ಕಣಿವೆಯ ಮಣಿಯ ಪರಿಯಾಣದಿಂ ತೋರ್ಕೆವೆತ್ತಹ್ಹುರೆ
ತಂನೊಂದಾನೆಯಂ ಸೇವುಣ ನೃಪಬಳಮಂ ನೊಂಕಿಬೆಂನಟ್ಟಿಕೊಂದಂ
ಸೊರಟೂರಿಂ ಕ್ರಿಷ್ಣವೇಣಿ ನದಿಯ ತಡಿವರಂ ವೀರಬಲ್ಲಾಳ ರಾಯಂ॥

ಈ ಯುದ್ಧ ಸೊರಟೂರಿನಲ್ಲಿ ನಡೆದಿದೆ, ಆದುದರಿಂದಲೇ ಸೊರಟೂರಿನಿಂದ ಕೃಷ್ಣಾ ನದಿಯವರೆಗೂ ಸೇವೂಣರ ಸೈನ್ಯವನ್ನು ಬೆನ್ನಟ್ಟಿಕೊಂಡು ಹೋಗಿ ಸೋಲಿಸಿದ್ದಾನೆ. ಈ ಶಾಸನದಿಂದ ವೀರಬಲ್ಲಾಳನಲ್ಲಿ ಬಳಿಷ್ಠವಾದ ಆನೆಯದಳ ಇರುವುದರಬಗ್ಗೆ ತಿಳಿದುಬರುತ್ತದೆ. ಬಳ್ಳಾರಿ ಜಿಲ್ಲೆ ಹಾಗೂ ಮೋರಿಗೇರಿ ಪರಿಸರದಲ್ಲಿ ದೊರೆಯುವ ಶಾಸನಗಳಲ್ಲಿ ಹೊಯ್ಸಳರ ಕಾಲದ ಆಳ್ವಿಕೆಯನ್ನು ತಿಳಿದುಕೊಳ್ಳಬಹುದು.

## ವಿಜಯನಗರದ ಅರಸರು

ಕರ್ನಾಟಕದ ಐತಿಹಾಸಿಕ ಪರಂಪರೆಯಲ್ಲಿ ಪ್ರಮುಖಸ್ಥಾನವನ್ನು ಉಳಿಸಿಕೊಂಡು ಬಂದಿರುವ ವಿಜಯನಗರದ ರಾಜಧಾನಿ 'ಹಂಪಿ' ಹಾಗೂ ಬಳ್ಳಾರಿ ಜಿಲ್ಲೆಯ ಸುತ್ತಮುತ್ತಲ ಪ್ರದೇಶಗಳಲ್ಲಿ ಅವರ ಕಾಲಕ್ಕೆ ಸಂಬಂಧಿಸಿದ ಅನೇಕ ಶಾಸನಗಳು ದೊರೆತಿವೆ. ಸಂಗಮ, ತುಳುವ ಹಾಗೂ ಅರವೀಡು ಮನೆತನದ ಶಾಸನಗಳು ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತವೆ. ಮೋರಿಗೆರೆ ಪರಿಸರದಲ್ಲಿ ಕೃಷ್ಣದೇವರಾಯ, ಅಚ್ಯುತದೇವರಾಯ ಹಾಗೂ ಸದಾಶಿವರಾಯನ ಕಾಲದ ಶಾಸನಗಳು ಅಧಿಕವಾಗಿ ದೊರೆಯುತ್ತವೆ.

ಕೋಗಳಿ ಗ್ರಾಮದ ಚಾವಡಿ ಬಳಿ ಇರುವ ವೀರಗಲ್ಲು ಕ್ರಿ.ಶ.೧೫೧೮ ಸೆಪ್ಟೆಂಬರ್ ೨೯ರ ಶಾಸನವು[೪೫] ಕೃಷ್ಣದೇವರಾಯ ಆಳ್ವಿಕೆಯಲ್ಲಿ ಸೋಲೂರ ಬಸವಪನಾಯಕನ ಮಗ ಕೃಷ್ಣಪ್ಪನಾಯಕನು ಅಲಬೂರಿನ ಹೊಂನತಿದೇವಿಗೆ ಮಾಡಿದ ಭೂದಾನದ ವಿವರವಿದೆ(ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧ ಹಗರಿಬೊಮ್ಮನಹಳ್ಳಿ೮) ಶಾಸನದಲ್ಲಿ ಈ ರೀತಿಯಾಗಿ ಉಲ್ಲೇಖವಿದೆ.

ಬಹುದಾನ್ಯ ಸಂವತ್ಸರದ ಆಸ್ವಿಯುಜ ಬಹುಳ ದಶಮಿ
ಸೋವಾರದಲು ಶ್ರೀಮತು (ಕೃಷ್ಣ) ದೇವರಾಯರ

ನಿಜಹಿತ ಸೋಲುರ ಬಸವಪ (ನಾ)ಯಕ ಕೋಮಾರ(ಕ್ರಿ)

ಷ್ಣಪ ನಾಯ(ಕ)ರು ಅಲುಬುರ ಹೊಂನತಿ ದೇವತೆಗೆ

ಕೊಟ್ಟ ಮಾಂನ್ಯದ ಹೊಲ ಕಳದಿ ಕಳದಿ ಬಳದ...

....ರೆ ವಾರಣಾಸಿಅಲಿ ಗೋವ ಕೊಂದ ಪಾಪ ಹೋಹರು

ಗಂಗೆತಡಿಯಲಿ ಬ್ರಾಂಹ್ಮಣರ ಕೊಂದ ಪಾಪಕೆ ಹೋಹರು

ಯಿದ ಅಳಿದವರಿಗೆ ಕತ್ತೆ ತುಂಣಿ ಕಳಮೊಗೆ ಸುರೆಯ

ಛತ್ರದಳ್ಳಿ ಗ್ರಾಮದ ಕ್ರಿ.ಶ ೧೫೫೯ ಮೇ ೨೮ ರ ಶಾಸನವು[೪೬] ಸದಾಶಿವ ದೇವರಾಯನು ಆಳುತ್ತಿದ್ದಾಗ, ಮಾಲ್ಯವಂತ ರಘುನಾಥ ದೇವರ ಅಮೃತ ಪಡಿಗೆ ಸಲ್ಲುವ ಛತ್ರದ ಹಳ್ಳಿಯ ಗಾವುಡುಗಳು ಗ್ರಾಮದ ಧರ್ಮದ ಏತಕ್ಕೆ ನೀಡಿದ ಧರ್ಮ, ಶಾಸನದಲ್ಲಿ ಹೆಸರು ಗೊಂಡಿರುವ ಉಪಾರಿ ಬೋವುಗಳು ನೀರು ಎತ್ತುವವನಿಗೆ ಇಬ್ಬಳ ಉಪ್ಪನ್ನು ಕಮ್ಮಾರರು ಕಬ್ಬಿಣದ ಖಾನೆಯನ್ನೂ ಯೀಳಗೆಗರು ಯೀಚಲಮರವನ್ನು ಬಿಟ್ಟು ಕೊಟ್ಟರು ಎನ್ನುವುದು ಉಲ್ಲೇಖವಿದೆ.

ಮಗಿಮಾವಿನಹಳ್ಳಿ ಗ್ರಾಮದ ಶಾಸನವು[೪೭] ಕ್ರಿ.ಶ ೧೫೪೪ ಮಾರ್ಚ್ ೯ ರಂದು ಅಳಿಯ ರಾಮರಾಜಯ್ಯನು ತನ್ನ ಮಗಳು ತಿರುಮಲ್ಲಮ್ಮನಿಗೆ ಪುಣ್ಯವಾಗಬೇಕೆಂದು ಚಿಕ್ಕ ತಿಮ್ಮಾಪುರ ಅಗ್ರಹಾರವನ್ನು ಮಾಡಿಸುತ್ತನೆ ಎಂದು ಈ ಶಾಸನದಿಂದ ತಿಳಿದು ಬರುತ್ತದೆ. ಮೋರಿಗೆರೆ ಪರಿಸರದಲ್ಲಿ ಬರುವ ಛತ್ರದಳ್ಳಿ, ಮಗಿಮಾವಿನಹಳ್ಳಿ, ಕೋಗಳಿ ವಿಜಯನಗರ ಸಾಮ್ರಾಜ್ಯ ಆಡಳಿತಕ್ಕೆ ಒಳಪಟ್ಟಿದೆ ಎಂದು ದೃಢಪಡಿಸುತ್ತದೆ. ಆದ್ದರಿಂದ ಮೋರಿಗೆರೆಯು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿದು ಬರುತ್ತದೆ

ಮೋರಿಗೆರೆ ವಿಜಯನಗರದ ರಾಜಧಾನಿ 'ಹಂಪಿ'ಗೆ ಹತ್ತಿರವಾಗಿದ್ದು ಹೆಚ್ಚಾಗಿ ಇಲ್ಲಿ ಹುಲ್ಲುಗಾವಲು ಇರುವುದರಿಂದ ಕುದುರೆ, ಆನೆಗಳಿಗೆ, ಸೈನ್ಯಗಳಿಗೆ ವಿಶ್ರಾಂತಿ ತಾಣಗಳಾಗಿದ್ದಿರಬಹುದು. ಆದ್ದರಿಂದ ಮೋರಿಗೆರೆಯು ವಿಜಯನಗರದ ಆಳ್ವಿಕೆಗೊಳ ಪಟ್ಟಿತ್ತೆಂದು ಅಧ್ಯಯನದಿಂದ ತಿಳಿದುಬರುತ್ತದೆ.

**ಪಾಳೆಗಾರರು**

ಕ್ರಿ.ಶ. ಸು ೧೫೬೫ ರ ತಾಳಿ ಕೋಟೆಯ ಯುದ್ದದ ನಂತರ ವಿಜಯನಗರ ಸಾಮ್ರಾಜ್ಯ ಪತನಗೊಂಡಿತು. ಸೇನಾನಿಗಳು, ಸಾಮಂತರು, ಬೇರೆ-ಬೇರೆ ಭಾಗಗಳಲ್ಲಿ ಸ್ವತಂತ್ರವಾಗಿ ಆಳಲು ಪ್ರಾರಂಭಿಸಿದರು. ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ ಪ್ರದೇಶದ ಹಂಡೆ ಪಾಳೆಗಾರರು. ಹರಪನಹಳ್ಳಿ ಹಡಗಲಿ ಭಾಗವನ್ನು ಹರಪನಹಳ್ಳಿ ಪಾಳೆಗಾರರು, ಗುಡೆಕೋಟೆ ಪಾಳಗಾರರು ಗುಡೇಕೋಟೆ ಮತ್ತು ಚೋರ ನೂರ ಭಾಗವನ್ನು, ಜರಿಮಲೆ ಪಾಳೆಗಾರರು ಕೂಡ್ಲಿಗಿ, ಉಜ್ಜನಿ, ಸಂಡೂರುಗಳನ್ನು ಆಳುತ್ತಿದ್ದರು. ಅವುಗಳಲ್ಲಿ ಮೋರಿಗೆರೆ ಸಹ ಒಂದು.

ಹಗರಿಬೊಮ್ಮನಹಳ್ಳಿ ನಾರಯಾಣದೇವರಕೆರೆ ನಂದಿಬೇವೂರು ಕೂಡ ಹರಪನಹಳ್ಳಿ ಪಾಳೆಗಾರರ ಆಳ್ವಿಕೆಗೆ ಮೋರಿಗೆರೆ ಪರಿಸರವು ಸೇರಿತ್ತು ಎಂದು ಉಲ್ಲೇಖಿಸಬಹುದು

**ಹರಪನಹಳ್ಳಿ ಪಾಳೆಗಾರರು**

ವಿಜಯನಗರದ ತರುವಾಯ ಸೋಮಶೇಖರ ಬಸಪ್ಪನಾಯಕನು ಹರಪನಹಳ್ಳಿಯಲ್ಲಿ ರಾಜ್ಯಭಾರ ಮಾಡುತ್ತಿದ್ದನು. ವಿಜಯನಗರ ನಂತರದ ಕಾಲಘಟ್ಟಗಳಲ್ಲಿ ಪಾಳೆಯ ಪಟ್ಟುಗಳು ಅಧಿಕಾರಕ್ಕೆ ಬರುತ್ತವೆ. ಅವುಗಳಲ್ಲಿ ಮೋರಿಗೆರೆಯೂ ಸಹ ಒಂದಾಗಿದೆ ಮೋರಿಗೆರೆಯು ಕೂಡ ಹರಪನಹಳ್ಳಿ ಪಾಳೆಗಾರರ ಆಳ್ವಿಕೆಗೆ ಒಳಪಟ್ಟಿತ್ತೆಂದು ಉಲ್ಲೇಖಿಸಬಹುದು.

ಒಟ್ಟಾರೆಯಾಗಿ ಮೋರಿಗೆರೆ ರಾಜಕೀಯ ಚರಿತ್ರೆಯನ್ನು ಗಮನಿಸಿದಾಗ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗದ ಅರಸರು, ಪಾಳೆಗಾರರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದು ಕಂಡು ಬರುತ್ತದೆ ಮುಖ್ಯವಾಗಿ ಮೋರಿಗೆರೆ ರಾಜಕೀಯ ಇತಿಹಾಸವನ್ನು ಬಲಪಡಿಸಿದ್ದಾರೆ ಎಂದು ತಿಳಿಯಬಹುದು.

**ಮಹಾಮಂಡಳೇಶ್ವರರು**

'ಮಹಾಮಂಡಳೇಶ್ವರ' ಶಬ್ದದ ಅರ್ಥ ವಿಸ್ತಾರವಾದ ಭೂಮಿಗೆ ಅಥವಾ ವಿಭಾಗದ ಒಡೆಯ. ಮಹಾಮಂಡಳೇಶ್ವರರು ಕೆಲವೊಮ್ಮೆ ಒಂದಕ್ಕಿಂತ ಹೆಚ್ಚು ವಿಭಾಗಗಳನ್ನು ಆಳುತ್ತಿದ್ದರು. ಚಕ್ರವರ್ತಿಯೊಬ್ಬನಿಗೇ ತನ್ನ ವಿಸ್ತಾರವಾದ ಸಾಮ್ರಾಜ್ಯ ಆಳುವುದು ಕಷ್ಟದ ಕೆಲಸ. ಹೀಗಾಗಿ ಸಾಮ್ರಾಜ್ಯದ ವಿವಿಧ ವಿಭಾಗಗಳಿಗೆ ತನಗೆ ಆಪ್ತರಾದವರನ್ನು, ನಿಷ್ಠೆಯಿಂದ ಇರುವವರನ್ನು 'ಮಹಾಮಂಡಳೇಶ್ವರ'ರೆಂದು ನೇಮಿಸುತ್ತಿದ್ದನು[೪೮]. ಪರಂಪರಾಗತವಾಗಿ ಆಳುತ್ತಾ ಬಂದವನು ಚಕ್ರವರ್ತಿಗೆ ನಿಷ್ಠೆಯಿಂದ ಇದ್ದರೆ ಅವರೇ ಮಹಾಮಂಡಳೇಶ್ವರರಾಗಿ ಮುಂದುವರೆಯುತ್ತಿದ್ದರು. ಇಲ್ಲದಿದ್ದರೆ ಆ ಸ್ಥಾನಕ್ಕೆ ಬೇರೆಯವರ ನೇಮಕ ಮಾಡುತ್ತಿದ್ದರು. ಉದಾಹರಣೆಗೆ ನೊಳಂಬ ಪಲ್ಲವರು ಇಮ್ಮಡಿ ಸೋಮೇಶ್ವರರನಲ್ಲಿ ತಮ್ಮ ನಿಷ್ಠೆ ಇಟ್ಟಿದ್ದರಿಂದ ಚಕ್ರವರ್ತಿಯಾದ ಆರನೆಯ ವಿಕ್ರಮಾದಿತ್ಯನು ಇವರನ್ನು ತೆಗೆದುಹಾಕಿ, ಪಾಂಡ್ಯರನ್ನು ನೊಳಂಬವಾಡಿಗೆ ಮಹಾಮಂಡಳೇಶ್ವರರೆಂದು ನೇಮಕ ಮಾಡುತ್ತಾನೆ. ಮಹಾಮಂಡಳೇಶ್ವರರಲ್ಲಿ ರಾಜವಂಶೀಯರು, ಇತರರು, ಹಿಂದೆ ಚಕ್ರವರ್ತಿಗಳಾಗಿದ್ದವರ ವಂಶದವರೂ ಇದ್ದಾರೆ. ಇವರಲ್ಲಾ ಪ್ರಭುವಾಗಿ ತಮ್ಮ ವಿಭಾಗಗಳನ್ನು ಆಳುತ್ತಿದ್ದ ಚಕ್ರವರ್ತಿಗೆ ವಿಧೇಯರಾಗಿ ಇರುತ್ತಿದ್ದರು.

ಬಳ್ಳಾರಿ ಜಿಲ್ಲೆ ಹಿಂದೆ ಕೋಗಳಿ ೫೦೦ ಮತ್ತು ಸಿಂದವಾಡಿ ಸಾವಿರ ವಿಭಾಗದಲ್ಲೂ ಹಂಚಿಹೋಗಿತ್ತು. ಇವೆರೆಡೂ ಭಿನ್ನ ಮಹಾಮಂಡಳೇಶ್ವರರ ಆಳ್ವಿಕಗೊಳಪಟ್ಟಿದ್ದರೂ ಇವರಿಬ್ಬರ ಮೇಲಿನ ನೊಳಂಬವಾಡಿಯ ಮಹಾಮಂಡಳೇಶ್ವರ ಒಬ್ಬನೇ ಆಗಿದ್ದಾನೆ. ಈ

ನೊಳಂವಾಡಿ೩೨೦೦ವನ್ನು ಆರಂಭದಲ್ಲಿ ನೊಳಂಬಪಲ್ಲವರು 'ಹೆಂಜೆರು' ಹಾಗೂ 'ಕಂಪಲಿ' ನಗರಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರೆ, ನಂತರ ಬಂದ ಪಾಂಡ್ಯರು ಉಚ್ಚಂಗಿದುರ್ಗವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಒಟ್ಟಾರೆಯಾಗಿ ಬಳ್ಳಾರಿ ಪ್ರದೇಶವನ್ನು ಆಳಿದ ಮಹಾಮಂಡಳೇಶ್ವರರೆಂದರೆ ನೊಳಂಬ ಪಲ್ಲವರು, ಉಚ್ಚಂಗಿ ಪಾಂಡ್ಯರು, ಕೋಗಳಿನಾಡಿನ ಕದಂಬರು, ಸಿಂದವಾಡಿ ಸಾಸಿರದ ಸಿಂದರು, ಗುತ್ತರು, ಮುಮ್ಮಡಿ ವಂಶದವರು ಈ ಆರು ವಂಶದವರಲ್ಲದೆ ಇತರ ಕೆಲವು ಮಹಾಮಂಡಳೇಶ್ವರರ ಉಲ್ಲೇಖ ಶಾಸನಗಳಲ್ಲಿ ಬರುತ್ತಿದ್ದು ಅವರನ್ನು ಕುರಿತು ಇಲ್ಲಿ ವಿವರಿಸಲಾಗಿದೆ. ಈ ಎಲ್ಲಾ ಮಹಾಮಂಡಳೇಶ್ವರರು ಬಳ್ಳಾರಿ ಜಿಲ್ಲೆಗೆ ಇತ್ತ ಕಾಣಿಕೆ ಅಪಾರವಾದುದು.

## ನೊಳಂಬ ಪಲ್ಲವರು

ಕಂಚಿಯ ಪಲ್ಲವ ವಂಶದವರು ವಶಪಡಿಸಿಕೊಂಡಿದ್ದ ಪ್ರದೇಶವನ್ನು ಆಳಲು ತಮ್ಮ ವಂಶದವರನ್ನೇ ನೇಮಕ ಮಾಡಿದ್ದು ಅವರ ಆಳ್ವಿಕೆಗೊಳಪಟ್ಟ ಪ್ರದೇಶ 'ನೊಳಂಬವಾಡಿ'[೪೯]ಯಾಗಿದೆ. ನೊಳಂಬ ಪಲ್ಲವರು ರಾಷ್ಟ್ರಕೂಟರ, ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಇವರಿಗೆ ಆಧೀನರಾಗಿ ಕ್ರಿ.ಶ.ಸು.೮ನೇ ಶತಮಾನದಿಂದ ಕ್ರಿ.ಶ.೧೦೭೬ರ ವರೆಗೆ ಬಳ್ಳಾರಿ ಜಿಲ್ಲೆಯ ಪ್ರದೇಶವನ್ನೊಳಗೊಂಡ ನೊಳಂಬವಾಡಿನಾಡನ್ನು ಆಳಿದ್ದಾರೆ. ಈ ನಾಡನ್ನು ಆಳಿದ ಪಲ್ಲವ ವಂಶದ ವಂಶಾವಳಿಯನ್ನು ಮೊರಿಗೆರೆ[೫೦] ಶಾಸನ ಘಟೆಯಂಕಕಾರನಿಂದ ಮುಂದುವರೆದ ವಂಶಾವಳಿಯನ್ನು ಹೀಗೆ ಹೇಳುತ್ತದೆ. ಜಗದೇಕಮಲ್ಲ ನೊಳಂಬ ಉದಯಾದಿತ್ಯದೇವ ಈತನಿಗೆ ಈರ್ವರು ಪುತ್ರರು.

(೧) ಜಗದೇಕಮಲ್ಲ ನೊಳಂಬ ಇರ್ಮಡಿನೊಳಂಬ

(೨) ತ್ಯೆಲೋಕ್ಯಮಲ್ಲ ನನ್ನಿ ನೊಳಂಬ ಪಲ್ಲವ ಪೆರ್ಮಾನನಡಿಗಳ್

ನೊಳಂಬ ಪಲ್ಲವರು ಮೋರಿಗೆರೆ ಶಾಸನದಲ್ಲಿರುವ ಉಲ್ಲೇಖಗಳನ್ನು ನೋಡಿದರೆ ಮೋರಿಗೆರೆ ಪರಿಸರದಲ್ಲಿ ಆಳ್ವಿಕೆಮಾಡಿದ್ದನ್ನು ಇಲ್ಲಿ ಸ್ಮರಿಸಬಹುದು.

ಮೋರಿಗೆರೆಯ[೫೧] ಶಾಸನದಲ್ಲಿ ದಂಡನಾಯಕ ತಿಕಣ್ಣ ಪ್ರಮುಖ ಲೆಂಕಸಾಸಿರ್ವರು ಮೋರಿಗೆರೆಯಲ್ಲಿ ಉದಯಾದಿತ್ಯನಿಗೆ ಪರೋಕ್ಷ ವಿನಯವಾಗಿ ೨೪ ಜನರಿಗೆ ಸತ್ರವನ್ನು, ನೊಳಂಬೇಶ್ವರ ದೇವಾಲಯವನ್ನು ಕಟ್ಟಿಸಿದನ್ನು ಹೇಳಲಾಗಿದೆ.

ನೊಳಂಬ ಪಲ್ಲವ ಪೆರ್ಮಾನಡಿ ಉದಯಾದಿತ್ಯ ದೇವನ ಕಿರಿಯ ಪುತ್ರನಾದ ತ್ರೇಳೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿಗಳ್‌ನನ್ನು ಕುರಿತು ಮೋರಿಗೆರೆ[೫೨] ಶಾಸನದಲ್ಲಿ ಈತನ ಪ್ರಶಸ್ತಿಯನ್ನು "ಕಾಂಚೀಪುರವರೇಶ್ವರಂ ವ್ಯೆರಿನಾರಾಯಣಂ ದ್ರೋಹಕಾಳಾನಳಂ ಮಾಣ್ಡಳಿಕ ತ್ರಿಣೇತ್ರಂ ರಾಜಮನೋಜಂ ಹಯವತ್ಸರಾಜಂ ಚಿತ್ರ ವೆಂಡಂಗಂ ತ್ಯಾಗ ಚಿನ್ತಾಮಣಿ ರಾಜಗಜ ಸರ್ವಜ್ಞಂ ಶ್ರೀ ಮತ್ತ್ರೈಕ್ಯಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿಗಳ್" ಎಂದು ಕೊಡಲಾಗಿದೆ. ಇದರಿಂದ ನೊಳಂಬ ಪಲ್ಲವರು ಮೊರಿಗೆರೆಯಲ್ಲಿ ಆಳ್ವಿಕೆ ಮಾಡಿದುದರ ಬಗ್ಗೆ ಬೆಳಕು ಚೆಲ್ಲುತ್ತದೆ. ಒಟ್ಟಾರೆ ಸು.ಕ್ರಿಶ.೮೦೦

ಕ್ಕೂ ಪೂರ್ವದಿಂದ ಕ್ರಿ.ಶ.೧೦೭೬ರ ವರೆಗೆ ನೋಳಂಬವಾಡಿನಾಡಿನ ಒಡೆತನ ಅನುಭವಿಸಿದ ನೊಳಂಬ ಪಲ್ಲವರೂ ಶೈವರಾಗಿದ್ದರೂ ಸಕಲ ಧರ್ಮಗಳನ್ನು ಸಮಾನ ದೃಷ್ಟಿಯಿಂದ ನೋಡಿದ್ದಾರೆ.

**ಗುತ್ತರು**

ಮಹಾ ಸಾಮಂತರಾಗಿ ಆಳುತ್ತಿದ್ದ ಗುತ್ತರು ತಾವು ಔತ್ತರೇಯ 'ಚಂದ್ರಗುಪ್ತ' ಮತ್ತು ವಿಕ್ರಮಾದಿತ್ಯರ ವಂಶದವರೆಂದು ಹೇಳಿಕೊಂಡಿದ್ದಾರೆ. 'ಗುಪ್ತ'ವೆಂಬುದು ರೂಢಿಯಲ್ಲಿ 'ಗುತ್ತ' ಎಂದು ವ್ಯಾಪಾರ್ಟಾಗಿದೆ. ಈ ವಂಶದವರು ತಮ್ಮನ್ನು 'ಪಾಟಳಿ ಪುರವರಾಧೀಶ್ವರ'ರೆಂದು ಕರೆದುಕೊಂಡಿದ್ದಾರೆ. ಗುಪ್ತ ಅರಸರಿಗೆ 'ಪಾಟಲಿಪುತ್ರ' ರಾಜಧಾನಿಯಾಗಿದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಕ್ರಿ.ಶ.೧೧೪೨ರ ಸುಮಾರಿಗೆ ಮಲ್ಲದೇವರಸನ ಕಾಲಕ್ಕಾಗಲೇ ಗುತ್ತರು ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನಿಗೆ ಮಹಾಮಂಡಳೇಶ್ವರರಾಗಿದ್ದರು. ಇವರು 'ಗುತ್ತವೊಳಲ್' ನಗರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಗುತ್ತರ ನಗರವಾದ, ಇದನ್ನು 'ಗುತ್ತವೊಳಲ್' ಎಂದು ಶಾಸನಗಳಲ್ಲಿ ಕರೆಯಲಾಗಿದೆ. ಇದು ಈಗಿನ ಹಾವೇರಿ ಜಿಲ್ಲೆಯ 'ಗುತ್ತಲ' ಗ್ರಾಮವಾಗಿದೆ. ಗುತ್ತಪೊಳಲ್ ಎಂಬುದು ಮೂಲ ಹೆಸರು. ಗುತ್ತ ಪೋಳಲ್> ಗುತ್ತವೊಳಲ್>ಗುತ್ತಲ ಎಂದಾಗಿದೆ. ಗುತ್ತರು ಬಳ್ಳಾರಿ ಜಿಲ್ಲೆ ಹೂವಿನಹಡಗಲಿ ತಾಲೂಕಿನ ಕೆಲವು ದೇವಾಲಯಗಳಿಗೆ ದತ್ತಿ ಬಿಟ್ಟಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿದ್ದ ಬೆಣ್ಣವೂರು೧೨ ವಿಭಾಗ ಇವರ ಆಳ್ವಿಕೆಗೊಳಪಟ್ಟಿತ್ತು. ಇವರಿಗೂ ಉಚ್ಚಂಗಿಯ ಪಾಂಡ್ಯರಿಗೂ ವೈವಾಹಿಕ ಸಂಬಂಧಗಳಾಗಿದ್ದುದನ್ನು ಶಾಸನಗಳು ನಿರೂಪಿಸುತ್ತವೆ.

ಮನ್ನೆಯ ಚಟ್ಟರಸನ ಉಲ್ಲೇಖ ಕ್ರಿ.ಶ.೧೦೪೫ರ ಮೋರಿಗೆರೆ[೫೩] ಶಾಸನದಲ್ಲಿದೆ. ಅಲ್ಲಿ ಇವನು ಬಲ್ಲವಾಡಿ ೭೦ನ್ನು ಆಳುತ್ತಿದ್ದನೆಂದು ಹೇಳಲಾಗಿದೆ. ಶಾಸನದಲ್ಲಿ "ಸಮಸ್ತ ದುಷ್ಟಾರಾತಿಮನ್ನೆಯಂ ಮದಾನಗ್ಧ ನಗ್ಧಜ ಸಿಂಹ ಸಾಹ ಸೋತ್ತುಂನುಜ್ಜೆನಿ ಪುರವರೇಶ್ವರ ಗುತ್ತರ ಭೀಮ ಚಲದಂಕರಾಮ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ಬಲ್ಲವಾಡಿಯೆರ್ಪ್ಪತರ ಮನ್ನೆಯ ಚಟ್ಟರಸ"ಎಂದು ಈತನನ್ನು ಕರೆಯಲಾಗಿದೆ. ಈ ಶಾಸನದಿಂದ ಮೋರಿಗೆರೆಯನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರು ಎಂಬುದನ್ನು ಉಲ್ಲೇಖಿಸಬಹುದು.

ಕುರುವತ್ತಿ[೫೪] ಶಾಸನದಲ್ಲಿ ಈತನ ಉಲ್ಲೇಖವಿದೆ. ಶಾಸನದಲ್ಲಿ ಈತನನ್ನು "ಮಹಾಮಂಡಳೇಶ್ವರಂ ಉಜ್ಜೇನಿ ಪುರವಾಧೀಶ್ವರಗುತ್ತವಂಶಾನ್ವಯದ್ಯುಮಣಿ ಸುಭಟ ಚೂಡಾಮಣಿ! ವಟಕಲ್ಪವೃಕ್ಷ ಲಾಂಛನ ವಿಜಯಸ್ತಂಭಂ ವೀರಾವಷ್ಟಂಭಂ ಪನ್ನರ್ವರ ಗಂಡಂ ಪಡೆ ಮೆಚ್ಚಿಗಂಡಂ ಮಂಡಳಿಕ ಭೈರವಂ ಶ್ರೀ ಮದ್ವಿಕ್ರಮಾದಿತ್ಯದೇವರ್" ಎಂದು ಕರೆಯಲಾಗಿದೆ. ಈತನು ಬೆಳಹುಗೆ೭೦, ಬೆಣ್ಣೆವೂರು೧೨ ವಿಭಾಗಗಳನ್ನು ಆಳುತ್ತಿದ್ದನು. ಈತನಲ್ಲಿ ದಂಡನಾಯಕನಾಗಿದ್ದ ಸುಸಂಗದಣ್ಣಾಯಕನು ಮಹಾಮಂಡಳೇಶ್ವರ ವಿಜಯ

ಪಾಂಡ್ಯರಸರ ಆಜ್ಞೆಯ ಮೇರೆಗೆ ಪೂರ್ವದಲ್ಲಿ ಹಿರಿಯ ವಿಕ್ರಮಾದಿತ್ಯ ಕೊಟ್ಟ ಸ್ಥಳವೃತಿ ಸಹಿತ೭೦ ಮತ್ತರು ಭೂಮಿಯನ್ನು ಮೋರಿಗೆರೆ ಪರಿಸರದಲ್ಲಿ ಬರುವ ಕುರುವತ್ತಿಯ ಆಹಮಲ್ಲೇಶ್ವರ ದೇವರಿಗೆ ಬಿಡುತ್ತಾನೆ.

### ಮಹಾ ಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕರು

ಕೇಂದ್ರಿಯ ಅಧಿಕಾರಿಗಳಾದ ಇವರು ಚಕ್ರವರ್ತಿಯಿಂದ ನೇಮಿಸಲ್ಪಟ್ಟ ಉನ್ನತಾಧಿಕಾರಿಗಳಾಗಿದ್ದಾರೆ. ಇವರು ಚಕ್ರವರ್ತಿಯ ಆದೇಶದ ಮೇರೆಗೆ ಪ್ರಭುಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದುದು ತಿಳಿದು ಬರುತ್ತದೆ. ಸಾಮಾನ್ಯವಾಗಿ ಸೈನ್ಯ, ಸುಂಕದ ಅಧಿಕಾರಿಗಳು ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ನೆಲೆ ನಿಂತು ತಮ್ಮ ಕಾರ್ಯ ನಿರ್ವಹಿಸುತ್ತಿದ್ದರು. ಚಕ್ರವರ್ತಿಯ ನೇರ ಪ್ರತಿನಿಧಿಗಳಾದ ಇವರು ಮಹಾಮಂಡಳೇಶ್ವರರ ಚಲನವಲನಗಳ ಮೇಲೆ ಕಣ್ಣಿಟ್ಟು, ಗುಪ್ತ ವರದಿಗಳನ್ನು ಚಕ್ರವರ್ತಿಗೆ ಕಳುಹಿಸುತ್ತಿದ್ದರು. ಸಾಮ್ರಾಜ್ಯದ ಹಿತ ಕಾಪಾಡುವಲ್ಲಿ ಈ ಅಧಿಕಾರಿಗಳು ಆಧಾರ ಸ್ತಂಭಗಳಾಗಿ ನಿಂತು ಕಾರ್ಯ ನಿರ್ವಹಿಸುತ್ತಿದ್ದರು. ಚಕ್ರವರ್ತಿಯಾದರೂ ವಿದ್ಯಾರ್ಹತೆ, ನಿಷ್ಠೆ, ಪ್ರತಿಭೆ ,ಪ್ರಾಮಾಣಿಕತೆಗಳನ್ನು ಪರೀಕ್ಷಿಸಿ ಯಶಪಡೆದವರನ್ನು ಮಾತ್ರ ಇಂಥ ಉನ್ನತಾಧಿಕಾರಿಗಳನ್ನಾಗಿ ನೇಮಿಸುತ್ತಿದ್ದರು. ಬಳ್ಳಾರಿ ಜಿಲ್ಲೆಯ ಶಾಸನಗಳಲ್ಲಿ ಇಂಥ ಕೆಲವು ಅಧಿಕಾರಿಗಳ ಬಗ್ಗೆ ಉಲ್ಲೆಖವಿದೆ.



ಮಹಾ ಸಾಮಂತಾಧಿಪತಿ ಮಹಾ ಪ್ರಚಂಡದಂಡನಾಯಕ ಸೋವಿಮಯ್ಯನ ಉಲ್ಲೇಖ ಮೋರಿಗೆರೆಯ[೫೫] ಶಾಸನದಲ್ಲಿದೆ. ಒಂದನೇ ಸೋಮೇಶ್ವರನ ಪಾದ ಪದ್ಮೋಪಜೀವಿಯಾಗಿರುವ ಈತನ ಲೆಂಕಸಾರ್ಸಿರ ಸನ್ನಧಿಯಲ್ಲಿ ಕೆರೆಯಕೆಳಗೆ ೩ ಮತ್ತರು ಭೂಮಿಯನ್ನು ಖರೀದಿಸಿ ಕೆರೆಯಲ್ಲಿ ಭಾವಿಯನ್ನು ತೋಡಿಸಿ ಅದಕ್ಕೆ ಸೋಮತೀರ್ಥವೆಂದು ಹೆಸರಿಟ್ಟು ಹೂದೋಟ, ನಂದನವನ ಇವುಗಳನ್ನು ಸೋಮೇಶ್ವರ ಪಂಡಿತರ ಕಾಲುತೊಳೆದು ನೊಳೆಂಬೇಶ್ವರದೇವರಿಗೆ ಕೊಡುತ್ತಾನೆ. ಶೈವನಾದ ಈತನ ಪ್ರಶಸ್ತಿಯನ್ನು ಶಾಸನದಲ್ಲಿ ಶಿವಪಾದ ಶೇಖರ ನೀತಿ ರತ್ನಾಕರಂ ನುಡಿದಂತೆ ಗಂಡಂ ಪತಿಹಿತ ಗರುಡ' ಎಂದು ಬಿರುದು ಕೊಡಲಾಗಿದೆ. ಇದರಿಂದ ಇವನು ತನ್ನ ಮಾತಿನ ಪ್ರಕಾರ ನಡೆಯುವವನೆಂದೂ ಗೊತ್ತಾಗುತ್ತದೆ. ಈ ಗ್ರಾಮದಲ್ಲಿ ಮಹಾಸಾಮಂತಾಧಿಪತಿಗಳ ಆಳ್ವಿಕೆಯನ್ನು ಕಾಣಬಹುದು.

### ದಂಡನಾಯಕರು

ದಂಡ ನಾಯಕರಲ್ಲಿ ಕೇಂದ್ರಿಯ ಮತ್ತು ಪ್ರಾಂತೀಯ ಎಂದು ಎರಡು ವಿಧ. ಕೇಂದ್ರೀಯ ದಂಡ ನಾಯಕರು ಚಕ್ರವರ್ತಿಯಿಂದ ನೇಮಿಸಲ್ಪಟ್ಟವರು. ಪ್ರಾಂತೀಯ ದಂಡನಾಯಕರು ಮಹಾ ಮಂಡಳೇಶ್ವರರಿಂದ ನೇಮಿಸಲ್ಪಟ್ಟವರು, ಇವರಲ್ಲಿ ಸುಂಕ, ಸೈನ್ಯ, ವಿದೇಶಾಂಗ ಹೀಗೆ ವಿವಿಧ ಇಲಾಖೆಗಳಿಗೆ ಸಂಬಂಧಪಟ್ಟಿದ್ದಾರೆ. ಮಹಾ ಸಾಮಾಂತಾಧಿಪತಿ ಮಹಾ ಪ್ರಚಂಡ ದಂಡನಾಯಕರ ಹಾಗೂ ಮಹಾಮಂಡಳೇಶ್ವರರ

ಕೆಳಗೆ ಕೆಲಸ ನಿರ್ವಹಿಸುವರು ಇವರಾಗಿದ್ದಾರೆ. ಇಂಥ ಅನೇಕ ದಂಡನಾಯಕರ ಪ್ರಸ್ತಾಪ ಮೋರಿಗೆರೆ ಶಾಸನದಲ್ಲಿ ಕಂಡುಬರುತ್ತದೆ.

ದಂಡನಾಯಕ ತಿಕಣ್ಣ ಪ್ರಾಂತೀಯ ದಂಡನಾಯಕನಾದ ಈತನು ತ್ರೈಲೋಕ್ಯಮಲ್ಲನನ್ನಿನೊಳಂಬ ಪಲ್ಲವ ಪೆರ್ಮ್ಮಾನಡಿಯಪಾದ ಪದ್ಮೋಪಜೀವಿಯಾಗಿದ್ದಾನೆ. ಮೋರಿಗೆರೆ[೫೬] ಶಾಸನದಲ್ಲಿ ಈತನು ಲೆಂಕಸಾಸಿರ್ವರ ಮುಖ್ಯಸ್ಥನಾಗಿದ್ದನೆಂದೂ ಹೇಳಲಾಗಿದೆ. ಇವನು ಅಮ್ಮಳೆ, ನೆಲ್ಲಿಕುದಿರು, ಸೊನ್ನ, ಪೊಳಲ್ಗುಂದೆ, ಸೂಗೂರು ಮತ್ತು ಮೋರಿಂಗೆರೆ ಇವುಗಳನ್ನು ಆಳುತ್ತಿದ್ದನು. ಈ ಲೆಂಕ ಸಾಸಿರ್ವರು ಮೋರಿಂಗೆರೆಯಲ್ಲಿ ಉದಯಾದಿತ್ಯದೇವನ ಪರೋಕ್ಷ ವಿನಯವಾಗಿ ೨೪ ಜನರಿಗೆ ಸತ್ರವನ್ನು ನೊಳಂಬೇಶ್ವರ ದೇವರನ್ನೂ ಮಾಡಿಸಿ ತಮ್ಮ ಹೆಸರಿನಲ್ಲಿ ಲೆಂಕೇಶ್ವರ ದೇವರನ್ನು ಮಾಡಿಸಿ ದೇವರ ಉಪಭೋಗಕ್ಕೆ ಮಠದ ವಿದ್ಯಾದಾನಕ್ಕೆಂದು ಅರಸರಿಗೆ ಬಿನ್ನಪಮಾಡಿ 'ಸಂವಂಟಿಯಪಾಳಂ' ಪಡೆದು ಅದಕ್ಕೆ 'ಶಿವಪುರ'ವೆಂದು ಹೆಸರನ್ನಿಟ್ಟು ಸೋಮೇಶ್ವರ ಪಂಡಿತರಿಗೆ ಬಿಟ್ಟಿದು ತಿಳಿದು ಬರುತ್ತದೆ. ಮೋರಿಗೆರೆಯಲ್ಲಿ ದಂಡನಾಯಕರು ಕೂಡ ಆಳ್ವಿಕೆಮಾಡಿದ್ದರು ಎಂಬುದು ಗೊತ್ತಾಗುತ್ತದೆ.

ಹೀಗೆ ದಂಡನಾಯಕರು ತಮ್ಮ ಕರ್ತವ್ಯ ಪಾಲನೆಯ ಜೊತೆಗೆ ಇಲ್ಲಿ ದೇವಾಲಯ, ಬಸದಿಗಳಿಗೆ ದತ್ತಿದಾನಮಾಡಿ ತಮ್ಮ ಹಿರಿಮೆಯನ್ನು ತೋರಿಸಿದ್ದಾರೆ. ದೇವಾಲಯ, ಬಸದಿಗಳ ನಿರ್ಮಾಣ, ಜೀರ್ಣೋದ್ಧಾರದಂಥ ಕಾರ್ಯಗಳನ್ನು ನೆರವೇರಿಸಿ ಈ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸದಲ್ಲಿ ಚಿರಸ್ಥಾನ ಪಡೆದುಕೊಂಡಿದ್ದಾರೆ.

## ಅಡಿ ಟಿಪ್ಪಣಿಗಳು

೧. ದೇವರ ಕೊಂಡಾರೆಡ್ಡಿ ಮತ್ತು ಇತರರು(ಸ) ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ೧೯೯೮. ಬಳ್ಳಾರಿ ೩

೨. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ೨೦೦೨ ಪು.೨೪

೩. ಅದೇ– ಪು. ೨೫

೪. ಅದೇ– ಪು. ೨೬

೫. ಬಡಿಗೇರ ವಾಸುದೇವ ಸಂಡೂರು ಪರಿಸರದ ಕಾರ್ತಿಕೇಯ ತಪೋವನ ೧೯೯೭ ಪು. ೯

೬. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ೨೦೦೨ ಪು ೨೭

೭. ಬಡಿಗೇರ ವಾಸುದೇವ ಸಂಡೂರು ಪರಿಸರದ ಕಾರ್ತಿಕೇಯ ತಪೋವನ ೧೯೯೭ ಪು. ೧೦ ಉಲ್ಲೇಖ

೮. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ೨೦೦೨ ಪು ೨೭

೯. ಡಾ॥ ದೇವರ ಕೊಂಡರೆಡ್ಡಿ ಮತ್ತು ಇತರರು ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ ಸಂಪುಟ ೧ ಹ.ಬೊ.ಹಳ್ಳಿ ೧೦ ಪು.೨೬೫

೧೦. ವಾಸುದೇವ ಬಡಿಗೇರ, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ೧೯೯೭ ಪು.೧೦

೧೧.ದೇವರ ಕೊಂಡಾರೆಡ್ಡಿ ಮತ್ತು ಇತರರು (ಸ) ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ೧೯೯೮. ಹಡಗಲಿ ಪು. ೧೨

೧೨. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ೨೦೦೨ ಪು.೩೦

೧೩. ಅದೇ– ಪು.೩೦

೧೪. ದೇವರಕೊಂಡಾರೆಡ್ಡಿ ಮತ್ತು ಇತರರು (ಸ) ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ೧೯೯೮. ಹರಪನಹಳ್ಳಿ ಪು.೨೧೦.

೧೫. ಅದೇ– ೧೯೯೮. ಹರಪನಹಳ್ಳಿ ಪು.೨೧೦.

೧೬. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ೨೦೦೨ ಪು.೭೮

೧೭. ದೇವರ ಕೊಂಡಾರೆಡ್ಡಿ ಮತ್ತು ಇತರರು (ಸಿ) ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ ಸಂಪುಟ–ಸಿ ೧೯೯೮ ಹ.ಬೊ.ಹಳ್ಳಿ–೩

೧೮. ಬಡಿಗೇರ ವಾಸುದೇವ, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ೧೯೯೭ ಪು.೧೦

೧೯. ದೇವರಕೊಂಡಾರೆಡ್ಡಿ ಮತ್ತು ಇತರುರು (ಸಿ) ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ ಸಂಪುಟ-ಸಿ ೧೯೯೮ ಬಳ್ಳಾರಿ-೫೨

೨೦. ಅದೇ- ೧೯೯೮ ಕೂಡ್ಲಿಗಿ-೫

೨೧. SII IX(I) ಗುತ್ತಿ ೪೫

೨೨. ದೇವರಕೊಂಡಾರೆಡ್ಡಿ ಮತ್ತು ಇತರುರು (ಸಿ) ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ ಸಂಪುಟ-ಸಿ ೧೯೯೮ ಬಳ್ಳಾರಿ-೧೨

೨೩. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ೨೦೦೨ ಪು.೩೨, ಉಲ್ಲೇಖ

೨೪. ಬಡಿಗೇರ ವಾಸುದೇವ, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ೧೯೯೭ ಪು.೧೧

೨೫. ದೇವರಕೊಂಡಾರೆಡ್ಡಿ ಮತ್ತು ಇತರುರು (ಸಿ) ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ ಸಂಪುಟ-ಸಿ ೧೯೯೮ ಹ.ಬೊ.ಹಳ್ಳಿ. ಪು.೨೪೭

೨೬. ಅದೇ-ಪು.೨೫೪

೨೭. ಅದೇ- ಹಬೊಹಳ್ಳಿ-೨ ಪು.೨೬೩

೨೮. ಅದೇ- ಹ.ಬೊ.ಹಳ್ಳಿ-೧೫ ಪು.೨೬೭

೨೯. ಅದೇ- ಸಂಡೂರು-೭

೩೦. ಅದೇ- ಹ.ಬೊ.ಹಳ್ಳಿ-೧೪ ಪು.೨೬೭

೩೧. ಅದೇ- ಹರಪನಹಳ್ಳಿ- ೨೧೦

೩೨. ಅದೇ- ಹರಪನಹಳ್ಳಿ-೧೨೬

೩೩. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ೨೦೦೨ ಪು. ೩೪

೩೪. ದೇವರಕೊಂಡಾರೆಡ್ಡಿ ಮತ್ತು ಇತರರು (ಸ) ಕನ್ನಡ ವಿಶ್ವವಿದ್ಯಾಲಯ. ಹಂಪಿ ಶಾಸನ ಸಂಪುಟ-೧ ಹರಪನಹಳ್ಳಿ ೫೩

೩೫. ಅದೇ- ಬಳ್ಳಾರಿ ೩೯.

೩೬. ಅದೇ- ಹ.ಬೊ.ಹಳ್ಳಿ ೨೮೨

೩೭. ಅದೇ- ಹ.ಬೊ.ಹಳ್ಳಿ-೨೮೮

೩೮. ಅದೇ- ಹರಪನಹಳ್ಳಿ-೨೩

೩೯. ಅದೇ- ಹರಪನಹಳ್ಳಿ ೩೪

೪೦. ಅದೇ- ಹರಪನಹಳ್ಳಿ ೪೩

೪೧. ಅದೇ- ಬಳ್ಳಾರಿ.-೨೦

೪೨. ಅದೇ- ಹ.ಬೊ.ಹಳ್ಳಿ-೨೪೯

೪೩. ಅದೇ- ಹ.ಬೊ.ಹಳ್ಳಿ-೨೭೭

೪೪. ಅದೇ- ಸಂಡೂರು-೧೧

೪೫. ಅದೇ- ಹ.ಬೊ.ಹಳ್ಳಿ-೨೬೩

೪೬. ಅದೇ- ಹ.ಬೊ.ಹಳ್ಳಿ ೨೯೯-೩೦೦

೪೭. ಅದೇ- ಹ.ಬೊ.ಹಳ್ಳಿ-೩೦೩

೪೮. ಡಾ.ಜೆ.ಎಂ.ನಾಗಯ್ಯ. ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ಇತಿಹಾಸ-೨೦೦೨ ಪು.-೫೩

೪೯. ಅದೇ-೨೦೦೨ ಪು-೫೪

೫೦.ಅದೇ-೨೦೦೨ಪು-೫೬

೫೧. ಅದೇ-೨೦೦೨ ಪು. ೬೩

೫೨. ಅದೇ-೨೦೦೨ ಪು. ೬೪

೫೩. ಅದೇ- ೨೦೦೨ ಪು. ೮೮

೫೪. ಅದೇ- ೨೦೦೨ ಪು. ೮೯

೫೫. ಅದೇ- ೨೦೦೨ ಪು. ೧೭೦

೫೬. ಅದೇ- ೨೦೦೨ ಪು. ೧೭೫

## ೩.೨ ಶಾಸನಗಳು

ಸಾಮಾನ್ಯವಾಗಿ ನಾಶವಾಗುವಂತಹ ಭೂರ್ಜಪತ್ರ ತಾಳೆಗರಿ ಕಾಗದ ಮೊದಲಾದವುಗಳ ಮೇಲಿನ ಬರಹವನ್ನು ಬಿಟ್ಟು ಬಹುಕಾಲ ಉಳಿಯುವಂತಹ ಶಿಲೆ, ಲೋಹ, ಮೊದಲಾದವುಗಳ ಮೇಲಿನ ಬರಹವನ್ನು ಶಾಸನವೆಂದು ಕರೆಯುತ್ತೇವೆ.[೧] ಅಪ್ಪಣೆ ಅಥವಾ ರಾಜಾಜ್ಞೆ ಎಂಬ ಸಾಮಾನ್ಯ ಅರ್ಥಗಳನ್ನು ಹೊಂದಿದ ಶಾಸನ ಎಂಬ ಪದವನ್ನು ಕಲ್ಲು, ಧಾತು, ಕಟ್ಟಿಗೆ ಮುಂತಾದವುಗಳ ಮೇಲೆ ಕೆತ್ತಿದ ಬರೆಹಗಳ ಸೂಚಿಸುವ ಒಂದು ಭಿನ್ನಾರ್ಥದಲ್ಲಿ ಬಳಸಲಾಗುತ್ತದೆ. ಒಟ್ಟಾರೆಯಾಗಿ ಕಲ್ಲಿನ ಬಂಡೆಗಳ ಮೇಲೆ, ಕಂಭಗಳ ಮೇಲೆ, ಗೋಡೆಗಳ ಮೇಲೆ, ವಿಗ್ರಹಗಳ ಪೀಠಗಳ ಮೇಲೆ, ತಾಮ್ರದ ಹಲಗೆಗಳು ಮುಂತಾದವುಗಳ ಮೇಲೆ ಕೆತ್ತಲಾದ ಪ್ರಾಚೀನ ಕಾಲದ ಬರಹಗಳನ್ನು ಸೂಚಿಸುವುದಕ್ಕಾಗಿ ಶಾಸನವೆಂಬ ಪದವನ್ನು ಬಳಸಲಾಗುತ್ತದೆ.[೨] ಇಲ್ಲಿ ಮುಖ್ಯವಾಗಿ ಕೆತ್ತನೆಯೇ ಶಾಸನದ ಮುಖ್ಯ ಲಕ್ಷಣವಾಗಿದ್ದರೂ ಕಲ್ಲು, ಕಟ್ಟಿಗೆ, ಗೋಡೆ, ಮೂಳೆ ಮುಂತಾದವುಗಳ ಮೇಲೆ ಮಸಿಯಲ್ಲಿ ಬರೆದ ಪ್ರಾಚೀನ ಬರಹಗಳನ್ನು ಶಾಸನಗಳೆಂದು ಕರೆಯುತ್ತಾರೆ.

ಭಾರತದೇಶ ಹೇರಳವಾದ ಶಾಸನ ಸಂಪತ್ತು ಹೊಂದಿದ್ದು. ದೇಶದ ವಿವಿಧ ಭಾಗಗಳಲ್ಲಿ ಈವರೆಗೆ ಸುಮಾರು ಒಂದು ಲಕ್ಷಕ್ಕಿಂತ ಅಧಿಕ ಶಾಸನಗಳು ದೊರೆತಿವೆ. ಅದರಲ್ಲಿ ತಮಿಳುನಾಡನೊಂದನ್ನು ಬಿಟ್ಟರೆ ಅತಿ ಹೆಚ್ಚು ಶಾಸನಗಳು ದೊರೆಯುವ ರಾಜ್ಯವೆಂದರೆ ಕರ್ನಾಟಕ, ಇಲ್ಲಿ ಕನ್ನಡ, ಸಂಸ್ಕೃತ, ಪ್ರಾಕೃತ, ತಮಿಳು, ತೆಲುಗು, ಮರಾಠಿ, ಮರ್ವಾರಿ, ಪರ್ಷಿಯಾ, ಅರಬ್ಬಿ, ಉರ್ದು ಮತ್ತು ಇಂಗ್ಲೀಷ್ ಭಾಷೆಯ ಶಾಸನಗಳು ದೊರೆತಿವೆ. ವಿಶಾಲವಾದ ಭಾರತದಂತಹ ಉಪಖಂಡದಲ್ಲಿ ಸಂಶೋಧನೆಯನ್ನು ಕೈಗೊಂಡರೆ ಇನ್ನೂ ಅಧಿಕವಾದ ಶಾಸನಗಳು ದೊರೆಯುವ ಸಾಧ್ಯತೆಗಳಿವೆ. ಅಶೋಕನ ಕಾಲದಿಂದ ಮಧ್ಯ ಕಾಲದವರೆಗಿನ ನಮ್ಮದೇಶದ ಇತಿಹಾಸ ಸಂಸ್ಕೃತಿಯನ್ನರಿಯುವಲ್ಲಿ ಶಾಸನ ಅಧ್ಯಯನವು ಅತ್ಯಂತ ಮಹತ್ವದ್ದಾಗಿದೆ.[೩] ಯಾವುದೇ ಒಂದು ಪ್ರದೇಶವನ್ನು ಅಧ್ಯಯನ ಮಾಡುವಾಗ ಅಲ್ಲಿಗೆ ಸಂಬಂಧ ಪಟ್ಟ ಶಾಸನಗಳನ್ನು ವಿವರವಾಗಿ ಅಭ್ಯಾಸ ಮಾಡುವುದರಿಂದ ಆ ಪ್ರದೇಶದ ರಾಜಕೀಯ, ಸಾಮಾಜಿಕ, ಧಾರ್ಮಿಕ ಸ್ಥಿತಿಗತಿಗಳನ್ನು ಅರಿಯಲು ಸುಲಭವಾಗುತ್ತದೆ.

### ದಾನಶಾಸನಗಳು

ಕರ್ನಾಟಕದಲ್ಲಿ ಶಾಸನ ಪರಂಪರೆಯನ್ನು ಅವಲೋಕಿಸಿದಾಗ ಅತಿ ಹೆಚ್ಚು ದೊರೆಯುವ ಶಾಸನಗಳೇ ದಾನಶಾಸನಗಳು. ಮುಖ್ಯವಾಗಿ ದಾನಗಳು ದೇವಾಲಯದಲ್ಲಿ ನಡೆಯುವ ಪೂಜೆ ಪುನಸ್ಕಾರಗಳಿಗೆ, ಮಠದಲ್ಲಿ ನಡೆಯುವ ವಿದ್ಯಾದಾನಕ್ಕಾಗಿ, ದೇವಾಲಯದಲ್ಲಿ ಪೂಜೆ ಮಾಡುವ ಪೂಜಾರಿಗಳಿಗೆ, ನರ್ತಿಸುವ ನರ್ತಕಿಯರಿಗೆ,

ವಾದ್ಯಗಾರರಿಗೆ, ವಿದ್ಯಾದಾನ ಮಾಡುವ ಗುರುಗಳಿಗೆ, ಸಾಂಸ್ಕೃತಿಕ ವಿಷಯಗಳಿಗೆ, ಅರವಟ್ಟಿಗೆ, ಕೆರೆಬಾವಿ ಮುಂತಾದ ಲೋಕೋಪಯೋಗಿ ಕಾರ್ಯಗಳಿಗೆ, ವ್ಯಕ್ತಿಯೊಬ್ಬನ ಸೇವೆ ಪರಾಕ್ರಮಗಳನ್ನು ಗುರುತಿಸಿ ನೀಡಿದ ದಾನವಾಗಿರುತ್ತದೆ. ದಾನವಾಗಿ ನೀಡುವ ಆರ್ಥಿಕ ಮೂಲ ಭೂಮಿಯಾಗಿರಬಹುದು. ನಗದುರೂಪದ ಹಣವಾಗಿರಬಹುದು ಅಥವಾ ಅಗತ್ಯ ವಸ್ತುಗಳ ಪೂರೈಕೆಯನ್ನು ದಾನ ಶಾಸನಗಳೆಂದು ಕರೆಯುತ್ತಾರೆ.[೪]

ಈ ಶಾಸನಗಳ ದಾನದ ವಿವರವಿರುವ ಭಾಗವು ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನ ಮಾಡುವವರಿಗೆ ಬಹಳ ಮುಖ್ಯವಾದ ಮಾಹಿತಿಯನ್ನೊದಗಿಸುತ್ತದೆ. ಯಾವುದೇ ಒಬ್ಬವ್ಯಕ್ತಿಗೆ ಅಥವಾ ಸಂಸ್ಥೆಗೆ ಸಾರ್ಥಕವಾಗುವ ಉದ್ದೇಶನ್ನಿಟ್ಟುಕೊಂಡು ನಗ ನಾಣ್ಯದ ರೂಪದಲ್ಲಿ ದಾನ ಮಾಡುತ್ತಿದ್ದರು. ಇಂತಹ ವಿಷಯಗಳನ್ನು ದಾಖಲಿಸುವುದು ಶಾಸನಗಳ ಮುಖ್ಯ ಉದ್ದೇಶವಾಗಿದೆ. ಶಾಸನಪರಂಪರೆಯನ್ನು ಗಮನಿಸಿದಾಗ ನಮಗೆ ಕಂಡುಬರುವ ಅತಿಹೆಚ್ಚಿನ ಶಾಸನಗಳು ದಾನಶಾಸನಗಳು. ಇದರಿಂದ ಪ್ರಾಚೀನ ಕಾಲದ ಜನರಲ್ಲಿ ಮೂಡಿಬಂದಿರುವ ಧಾರ್ಮಿಕ ಪರಂಪರೆಯನ್ನು ಕುರಿತುದಾನಶಾಸನಗಳು ವಿವರಿಸುತ್ತವೆ. ದಾನಶಾಸನಗಳು ಅಧಿಕವಾಗಿ ಕಾಣಲು ಧರ್ಮವೇ ಪ್ರಮುಖ ಕಾರಣ ಈ ದೇಶದಲ್ಲಿ ರಾಜನಿಂದ ಮೊದಲ್ಗೊಂಡು ಜನಸಾಮಾನ್ಯರಲ್ಲಿ ಮೂಡಿರುವ ಭಕ್ತಿ, ದೈವಭಾವನೆಗಳಿಂದ ಸಮಾಜದಲ್ಲಿನ ಉತ್ತಮ ಕಾರ್ಯಗಳಿಗೆ ರಾಜನಿಂದ ನೀಡಿದ ದಾನಗಳು ಸಾಮಾನ್ಯ ಜನರಿಗೆ ಪ್ರೇರಕ ಶಕ್ತಿಯಾಗಿ ಸಮಾಜ ಶಾಂತತೆಯ ಜೊತೆಗೆ ಅಧಿಕಾರವನ್ನು ಸ್ಥಾಪಿಸಲು ಹಾಗೂ ಉತ್ತಮ ಕಾರ್ಯಗಳನ್ನು ಕೈಗೊಳ್ಳುವುದರಿಂದ ಧರ್ಮಕ್ಕೆ ದಾನ – ದತ್ತಿಗಳನ್ನು ಇಮ್ಮಡಿಗೊಳಿಸುತ್ತಿದ್ದರು. ಇಂತಹ ಕಾರ್ಯಗಳನ್ನು ಕೈಗೊಳ್ಳುವುದರಿಂದ ಧರ್ಮಕ್ಕೆ ದಾನ–ದತ್ತಿಗಳನ್ನು ಇಮ್ಮಡಿಗೊಳಿಸುತ್ತಿದ್ದರು. ಇಂತಹ ಕಾರ್ಯಗಳಿಗೆ ನಮ್ಮ ಹಿಂದಿನವರು ಮಾಡಿದಂತಹ ಪುಣ್ಯದ ಕೆಲಸಗಳು ಮಾದರಿಯಾಗಿರುತ್ತಿದ್ದವು. ಕ್ರಿ.ಶ.೧೫ ನೆಯ ಶತಮಾನದ ಲಕ್ಷ್ಮೀಧರನ ಶಾಸನದಲ್ಲಿ[೫] ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಗಾರಮಂ ಮಾಡಿ ಸಜ್ಜರೆಯೊಳ್ಪಿಲ್ಕಿದನಾಥರಂ ಬಿಡಿಸು ಮಿತ್ರರ್ಗೆ, ಬುಕೆಯಿ ನಂಬಿದವರ್ಗ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯಾನುತ್ತಿಂತೆಲ್ಲವಂ ಎಂದು ಹೇಳಿರುವುದರಿಂದ ಕೆರೆಯನ್ನು ಕಟ್ಟಿಸುವುದು, ಬಾವಿತೋಡಿಸುವುದು. ದೇವಾಲಯ ನಿರ್ಮಾಣ ಮಾಡಿಸುವುದು, ಸೆರೆಯಲ್ಲಿಸಿಕ್ಕಿರುವ ಅನಾಥರನ್ನು ಬಿಡಿಸುವುದು, ಮಿತ್ರರಿಗೆ ಒಳ್ಳೆಯದನ್ನು ಮಾಡುವುದು, ನಂಬಿದವರಿಗೆ ದ್ರೋಹ ಬಗೆಯದಿರುವುದು ಮುಂತಾದವು ಸತ್ಕಾರ್ಯಗಳೆಂದು ಉಲ್ಲೇಖಿಸಿದೆ. ಇವು ಭಾರತೀಯರಲ್ಲಿ ಹಾಗೂ ಜನಾಂಗದಲ್ಲಿ ಬೆಳೆದು ಬಂದಿರುವ ನಂಬಿಕೆಗಳು, ಎಲ್ಲಾ ಕಾಲಮಾನಗಳಲ್ಲಿ ನಂಬಿಕೊಂಡುಬಂದ ಈ ನಂಬಿಕೆಗಳು ಅಲ್ಪ–ಸ್ವಲ್ಪ ಬದಲಾವಣೆ ಯಾದರೂ ಈಗಲೂ ಚಾಲ್ತಿಯಲ್ಲಿವೆ.

ಈಗಾಗಿ ಮನುಷ್ಯ ತಾನುಗಳಿಸಿದ ಸಂಪತ್ತನ್ನು ದೇವಾಲಯಗಳನ್ನು ಕಟ್ಟಿಸಲು, ಕೆರೆಕಟ್ಟೆಗಳ ನಿರ್ಮಾಣಕ್ಕಾಗಿ ಬಳಸಿಕೊಂಡು ಸದ್ವಿನಿಯೋಗ ಮಾಡುತ್ತಿದ್ದ, ದೇವಾಲಯಗಳು

ಜನಜೀವನದ ಒಂದು, ಸಾಮಾಜಿಕಸಂಸ್ಥೆ. ಇವುಹಾಳಾಗದಂತೆ ಜೀರ್ಣೋದ್ದಾರ ಮತ್ತು ಅಲ್ಲಿನ ದಿನನಿತ್ಯದ ಪೂಜೆಗಾಗಿ, ಅಲ್ಲಿನ ಪೂಜಾರಿಗಳಿಗೆ ದಾನ ನೀಡುತ್ತ ಬಂದು, ಇದು ತನ್ನ ಮತ್ತು ಕುಟುಂಬದ ಮುಂದಿನ ಭವಿಷ್ಯಕ್ಕಾಗಿ ದಾನ ನೀಡುತ್ತಿದ್ದ, ಇದೇ ದಾನಕ್ಕೆ ಮುಖ್ಯ ಪ್ರೇರಣೆ ಹೀಗೆ ದಾನ ನೀಡುವಾಗ ತನ್ನ ವೃತ್ತಿಗನುಗುಣವಾಗಿ ನೀಡುತ್ತಿದ್ದನು. ರೈತನಾದವನು ತಾನು ಬೆಳೆದ ಬೆಳೆಯ ಪಾಲು, ತೋಟಗಾರ ತನ್ನ ತೋಟದಲ್ಲಿ ಬೆಳೆಯುವ ಹೂ, ಎಲೆ, ಅಡಿಕೆ, ಮುಂತಾದವುಗಳನ್ನು, ವ್ಯಾಪಾರಿಯಾದವನು ವ್ಯಾಪಾರ ಮಾಡುವ ವಸ್ತುಗಳನ್ನು ತೆಲ್ಲಿಗರು ದೇವರ ದೀಪಕ್ಕೆ ಎಣ್ಣೆ ಮುಂತಾದವುಗಳನ್ನು ತಮ್ಮ ಸಾಮರ್ಥ್ಯಕ್ಕನುಸಾರವಾಗಿ ದಾನ ನೀಡುತ್ತಿದ್ದರು. ರಾಜನಾದವನು ಭೂದಾನ ನೀಡಿ, ಆ ಭೂಮಿಗೆ ತೆರಿಗೆಯಿಂದ ವಿನಾಯಿತಿ ನೀಡುತ್ತಿದ್ದನು. ರಾಜರು ತಮ್ಮ ಹೆಸರಿನಲ್ಲಿ ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದರು.[೬] ಹೀಗೆ ನೀಡಿದ ಉದ್ದೇಶಗಳು ನೆರವೇರುವಂತೆ ಗಮನಿಸುವುದು ಹಾಗೂ ದುರುಪಯೋಗ ಮಾಡಿದಂತವರನ್ನು ಶಿಕ್ಷಿಸುವುದು ಅಥವಾ ಆ ಸ್ಥಳದಿಂದ ಬದಲಾಯಿಸುವುದು ಅಥವಾ ದೊರೆಗೆ ದೂರು ಕೊಡುವ ಕೆಲಸವನ್ನು ಸ್ಥಳೀಯರು ನಿರ್ವಹಿಸುತ್ತಿದ್ದರು. ಈ ಕೆಳಗಿನಂತೆ ದಾನ ಶಾಸನಗಳನ್ನು ವಿವರಿಸಿದೆ.

ಮೋರಿಗೆರೆ ಗ್ರಾಮದ ಉದ್ದಿ ಬಸವಣ್ಣನ ಗುಡಿಯಲ್ಲಿ ಇರಿಸಿರುವ ಶಾಸನದಲ್ಲಿ ಕ್ರಿ.ಶ.೧೦೪೫ ರ ಚಾಳುಕ್ಯ ದೊರೆ ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಚಾಳುಕ್ಯಾಭರಣಂ ಶ್ರೀ ಜಯಸಿಂಹವಲ್ಲಭಾಗ್ರಜಂ ಚಲದಂಕರಾಮಂ ತ್ರೈಲೋಕ್ಯಮಲ್ಲಂ ಶ್ರೀ ಆಹವಮಲ್ಲದೇವನ ಆಳ್ವಿಕೆಯ ಕಾಲದ ಶಾಸನದಲ್ಲಿ[೭] ರಾಜ್ಯಭಾರ ಮಾಡುತ್ತಿದ್ದಾಗ, ಇವನ ಸಾಮಂತ ನೊಳಂಬ ಘಟೆಯಂಕಕಾರನ ಮಗ ಉದಯಾದಿತ್ಯ ಇವನ ಮಗ ಜಗದೇಕಮಲ್ಲ ಇರ್ಮಡಿ ನೊಳಂಬ, ಇವನ ತಮ್ಮ ತ್ರೈಲೋಕ್ಯಮಲ್ಲ ನನ್ನಿನೊಳಂಬಪಲ್ಲವಪೆರ್ಮಾನಡಿಯು ಬಲ್ಲಕುಂದೆ – ೩೦೦ ಕೋಗಳಿ – ೫೦೦. ಕದಂಬಳಿಗೆ –೧೦೦೦ ಕುದಿಯಹರವಿ–೨೦, ಕರಿವಿಡಿ–೭೦ ಮತ್ತು ನೊಳಂಬವಾಡಿ – ೩೨೦೦ ವನ್ನು ಆಳುತ್ತಿರಲು, ದಂಡನಾಯಕ ತಿಕಣ್ಣನ ಪ್ರಮುಖವಾಗಿ ಲೆಂಕಸಾಸಿರ್ವರು ಅಮ್ಮಳೆ, ನೆಲ್ಲಿಕುದಿರು, ಸೊನ್ನ, ಪೊಳಲ್ಗುಂದೆ, ಸೂಗೂರು, ಮೋರಿಂಗೇರೆ ಮೊದಲಾದ ಆರುಗ್ರಾಮಗಳನ್ನು ಆಳುತ್ತಿರಲು ಉದಯಾದಿತ್ಯನಿಗೆ ಪರೋಕ್ಷ ವಿನಯವಾಗಿ ೨೪ ಜನರಿಗೆ ಛತ್ರವನ್ನೂ ನೊಳಂಬೇಶ್ವರಮತ್ತು ಲೆಂಕೇಶ್ವರವನ್ನು ಮಾಡಿಸಿ ಅವುಗಳ ಪೂಜೆಗೆ ಹಾಗೂ ವಿದ್ಯಾದಾನಕ್ಕೆ ಅರಸನಿಂದ ಸವಂಟಿಯಪಾಳನ್ನು ಪಡೆದು ಅದಕ್ಕೆ ಶಿವಪುರವೆಂದು ಹೆಸರಿಟ್ಟರು. ರಾಜನು ಪೂವಿನ ಪಡಂಗೆಲೆಯ ನೆಲೆವೀಡಿನಲ್ಲಿದ್ದಾಗ ಘಟ್ಟಿಯ ಅರಸರು ಕೋಗಳಿಯ ಮಠದ ಮಳೆಯಾಳ ಪಂಡಿತನ ಶಿಷ್ಯನಾದ ಜ್ಞಾನೇಶ್ವರ ಪಂಡಿತ ಅವನ ಶಿಷ್ಯನಾದ ಸೋಮೇಶ್ವರ ಪಂಡಿತನ ಕಾಲನ್ನು ತೊಳೆದು ದಾನ ನೀಡುತ್ತಾನೆ. ಚಟ್ಟರಸ, ಘಟ್ಟಿಯರಸ, ಸೇನಬೋವ ಗೋವಿಂದಯ್ಯನು ವಿದ್ಯಾದಾನಕ್ಕೆ, ಸೂಳವಾಳಂಗೆ, ಕೊಳಲು ನುಡಿಸುವವನಿಗೆ, ಪರೆಕಾರನಿಗೆ, ಸೂಳೆಯರಿಗೆ, ಕಲುಕುಟಿಗ ಮುಚ್ಚೋಜ

ಮುಂತಾದವರಿಗೆ ಭೂದಾನ ನೀಡುತ್ತಾರೆ. ಶಾಸನಾಂತ್ಯದಲ್ಲಿ ನೈಷ್ಠಿಕರಲ್ಲದ ತಪೋಧನರನ್ನು ಮಠದಿಂದ ನಾಡರಸರು, ಮೋರಿಂಗೆರೆಯ ೧೨ ಮಹಾಜನರು ಸೇರಿ ಓಡಿಸಬೇಕೆಂದಿದೆ. ಈ ರೀತಿ ದಾನವಾಗಿ ಕೊಟ್ಟಿದ್ದನ್ನು ಈ ಶಾಸನದಲ್ಲಿ ಸ್ಮರಿಸಲಾಗಿದೆ.

ಮೋರಿಗೆರೆಯ ಅದೇ ದೇವಾಲಯದಲ್ಲಿರುವ ಶಾಸನದಲ್ಲಿ[೮] ಕ್ರಿ.ಶ.೧೦೪೬ರಲ್ಲಿ ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀ ಮತ್ರೈಲೋಕ್ಯಮಲ್ಲದೇವರ ವಿಜಯರಾಜ್ಯ ಆಳುತ್ತಿದ್ದಾಗ ಇವನ ಸಾಮಂತನಾದ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾನಡಿಯು ಬಲ್ಲಕುನ್ದೆ- ೩೦೦, ಕೋಗಳಿ- ೫೦೦, ಕದಂಬಳಿಗೆ- ೧೦೦೦, ಕುದಿಯ ಹರವಿ- ೭೦, ಕರಿವಿಡಿ- ೩೦. ಐದು ಗ್ರಾಮಗಳು ನೊಳಂಬವಾಡಿ- ೩೨೦೦ ವನ್ನು ಆಳುತ್ತಿದ್ದಾಗ, ಇವನ ದಂಡನಾಯಕ ತಿಕಣ್ಣನೇ ಮೊದಲಾಗಿ ಲೆಂಕಸಾಸಿರ್ವರು ಅರ್ಮಳೆ, ನೆಲ್ಕುದುರೆ, ಸೊನ್ನ, ಪೊಳಲ್ಗುನ್ದೆ, ಸೂಗೂರು, ಮೋರೆಂಗೆರೆ ಮೊದಲಾದ ಆರು ಊರುಗಳನ್ನು ಆಳುತ್ತಿದ್ದಾಗ ಮೋರೆಂಗೆರೆಯನ್ನು ಬಲ್ಲವರಸನ ಕೈಲಿ ಪಡೆದು ನೊಳಂಬೇಶ್ವರದೇವರಿಗೆ ವಿದ್ಯಾಭ್ಯಾಸಕ್ಕಾಗಿ, ಪಾದಮೂಲ ಪರಿವಾರ ಮುಂತಾದುವಕ್ಕೆ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು, ವಿರೂಪಾಕ್ಷದೇವರ ಸಮಕ್ಷಮದಲ್ಲಿ ದಾನ ನೀಡುತ್ತಾರೆ. ದಂಡನಾಯಕ ಸೋವಿಮಯ್ಯ ಬಾವಿಯನ್ನು ಕಟ್ಟಿಸಿ ಅದಕ್ಕೆ ಸೋಮತೀರ್ಥವೆಂದು ಹೆಸರಿಟ್ಟು, ಕೆರೆ, ಬಾವಿ, ತೋಟ ದಾನವನ್ನು ನೀಡಿರುವುದನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಮೋರಿಗೇರಿ ಅದೇ ದೇವಾಲಯದಲ್ಲಿರುವ ಕ್ರಿ.ಶ.೧೦೬೪ ಶಾಸನ[೯]ದಲ್ಲಿ ಸ್ವಸ್ತಿ ಸಮಸ್ತಭುವನಾಶ್ರಯಂ ಸಮಸ್ತಬುಧಜನಾಶ್ರಯು ನಾಹವಮಲ್ಲನಂಕಕಾರಂ ಪರಮಕಾಳಸೂರೆಕಾರಿಂ...... ಜನಾಧಾರ ವೈರಿಮದಮರ್ದ್ದನ ಪ್ರತಾಪಜನಾರ್ದ್ದನನ ಚಳಿತ ವಾಕ್ಯಂ ಚಾಳುಕ್ಯ....... ಮದನ ವಿಪಕ್ಷಕುಳ ಕಾಳದಣ್ಣಂ ವೀರಮಾರ್ತಣ್ಣಂರಿಪು..... ಹೃದಯಸೆಲ್ಲಂ ಸಾಹಸ ಮಲ್ಲಂ ದೀನಾನಾಥ ಚಿಂತಾಮಣಿ ಮಣ್ಡಳಿಕುವಂಕುಟ ಚೂಡಾಮಣಿ ವೆಂಗಿ ಮಣ್ಡಳೇಶ್ವರ ಶ್ರೀ ವಿಷ್ಣುವರ್ಧನ ಮಹಾರಾಜವಿಜಯಾದಿತ್ಯನು ನೊಳಂಬವಾಡಿ - ೩೨೦೦ ನ್ನು ವನ್ನು ಆಳುತ್ತಿದ್ದಾಗ ದಕ್ಷಿಣದಿಕ್ಕಿನ ದಿಗ್ವಿಜಯಾರ್ಥವಾಗಿ ಬಂದಾಗ. ಮೋರೆಂಗೆರೆಯ ನೊಳಂಬೇಶ್ವರ ದೇವರ...... ಪಂಡಿತರ ಕಾಲನ್ನು ತೊಳೆದು ಪಾರಮೇಶ್ವರದತ್ತಿಯ ಭೂದಾನ ನೀಡಿದ. ತಂತ್ರಪಾಳ ಮೈಲಯ್ಯನು ರಾಜನ ಆಣತಿಯಂತೆದಾನ ನೀಡುತ್ತಾನೆ.

ಮೋರಿಂಗೇರಿಯ ಅದೇ ದೇವಾಲಯದಲ್ಲಿರುವ ಶಾಸನ[೧೦]ದಲ್ಲಿ ಕ್ರಿ.ಶ.೧೦೮೨ ರಲ್ಲಿ ಅಂದರೆ ಸ್ವಸ್ತಿ ಶ್ರೀಮತ್ ದುಂದುಭಿ ಸಂವತ್ಸರದ ಮಾರ್ಗಸಿರ ಶುದ್ಧ ಪೌರ್ಣಮಿ ಸೋಮವಾರದಲಿ ನೊಣಂಬೇಶ್ವರ ದೇವರ ಹಳ್ಳಿ ಸವಡಿಯಲ್ಲಿ ರಾಜಗುರು ವಾಮರಾಸಿದೇವನು ಬೋವರ್ಸನ ಬಾವಿಗೆ ಯರೆಯ ಮತ್ತರು ೪ ಹೊಂಗೆ ೪ ಕೆಂಗಾಡು ೪ ಅನ್ತು ಮತ್ತರು ೧೨ ಭೂಮಿ ನೀಡಿದ ಉಲ್ಲೇಖವಿದೆ.

ಒಟ್ಟಾರೆಯಾಗಿ ದೇವಾಲಯಗಳಿಗೆ ಹಾಗೂ ಇನ್ನಿತರ ಕಾರ್ಯಗಳಿಗೆ ದಾನ ನೀಡಿ ಹಾಕಿಸಿದಂತ ದಾನಶಾಸನಗಳು ಸಮಾಜದಲ್ಲಿ ಎಲ್ಲೋ ಒಂದು ಕಡೆ ನಿಯಮಗಳನ್ನು ಹಾಕಿಕೊಂಡು, ಆ ನಿಯಮಗಳಿಗೆ ಸಮಾಜದಲ್ಲಿ ಬದುಕುವ ಜನರು ಸಹ ಸಮ್ಮತಿಸುವ ಹಾಗೆ ಉನ್ನತ ವರ್ಗದ ಜನರು ಸಾಮಾನ್ಯ ಜನರ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸುವಂತ ಕೆಲಸಗಳಿಗೆ ದಾನ ಕಾರ್ಯಗಳು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ ಇಂದು ಊಹಿಸಬಹುದು.

## ಅಡಿಟಿಪ್ಪಣಿಗಳು

೧) ಜಯದೇವ್.ಹು.ಕಾ. ಶಾಸನ ಮತ್ತು ಗದ್ಯ. ಸಂಪುಟ -೨ ೧೯೭೫. ಪುಟ ೩

೨) ಶಾಸನಶಾಸ್ತ್ರದ ಪರಿಚಯ, ಶಾಸನ ನಿರ್ದೇಶನಾಲಯ, ಮೈಸೂರು, ೨೦೦೪.ಪು.೧.

೩) ಅದೇ- ೨೦೦೪.ಪು.೧

೪) ಶೇಷಶಾಸ್ತ್ರಿ. ಆರ್. ಶಾಸನಪರಿಚಯ. ೧೯೮೨ ಪು.೭

೫) ಜಯಮ್ಮ.ಹೆಚ್. ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಪಿ.ಹೆಚ್.ಡಿ. ಅಪ್ರಕಟಿತ ಪ್ರಬಂಧ) ಕ.ವಿ. ವಿದ್ಯಾಲಯ ೨೦೦೨ ಪು. ೧೬೫

೬) ಅದೇ- ೨೦೦೨ ಪು.೧೬೬

೭) ಡಾ॥ದೇವರಕೊಂಡಾರೆಡ್ಡಿ ಮತ್ತು ಇತರರು (ಸಂ) ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ - ೧, ೧೯೯೮. ಹ.ಬೊ.ಹಳ್ಳಿ - ಪು.೨೮೨

೮) ಅದೇ- ೧೯೯೮. ಹ.ಬೊ.ಹಳ್ಳಿ ಪು -೨೮೮

೯)ಅದೇ- ೧೯೯೮. ಹ.ಬೊ.ಹಳ್ಳಿ- ಪು - ೨೮೭

೧೦) ಅದೇ- ೧೯೯೮. ಹ.ಬೊ.ಹಳ್ಳಿ-ಪು - ೨೮೬.

## ೩.೩ ದೇವಾಲಯ ಮತ್ತು ಮೂರ್ತಿಶಿಲ್ಪ

ದೇವಾಲಯ ಎಂಬುದು ಒಂದು ಧಾರ್ಮಿಕ ಕಟ್ಟಡ, ಸಾಮೂಹಿಕ ಪೂಜೆ, ಪ್ರಾರ್ಥನೆ ಸಲ್ಲಿಸಲು ಅನುಕೂಲವಿರುವ ಒಂದು ಜಾಗ ಅಥವಾ ಸ್ಥಳ, ಇದಕ್ಕೆ ದೇವಾಲಯ ದೇವಸ್ಥಾನ, ಗುಡಿ, ದೇವಮಂದಿರ, ದೇವಗಾರ, ದೇವಳ, ದೇಗುಲ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಇಂಗ್ಲೀಷ್ ಭಾಷೆಯಲ್ಲಿ 'ಟೆಂಪಲ್' ಎಂಬ ಶಬ್ದಕ್ಕೆ ದೇವರು ನೆಲೆಯಾಗಿರುವ ಸ್ಥಳ, ದೇವಸ್ಥಾನ, ಗುಡಿ, ಎಂಬ ಅರ್ಥವು ಇದೆ.[೧]

ದೇವಾಲಯವೆಂದರೆ ದೇವರು ಇರತಕ್ಕ ಸ್ಥಾನವಿಡೆ, ಜಾಗ ಎಂದು ಅರ್ಥ. ನಮ್ಮ ಮನಸ್ಸಿನ ಕಲ್ಪನೆಗೂ ಮೀರಿದ ಮನಸ್ಸಿಗೆ ಯಾವುದು ಆಧಾರವಾಗಿರುತ್ತದೆಯೋ ಅದು ದೇವರು, ದೇವರು ಸರ್ವವ್ಯಾಪಿ ಅಣುವಿನ ಚಿಕ್ಕ ಅಣುವಿನಲ್ಲಿ ದೇವರಿದ್ದಾನೆ, ಆದುದರಿಂದ ಪ್ರಾಚೀನ ಕಾಲದಲ್ಲಿ ದೇವ ಮಂದಿರಗಳ ಕಲ್ಪನೆ ಅಂದಿನ ಜನರ ಭಾವನೆಗೆ ಒಡಮೂಡಿದ್ದುದು ವಿಶೇಷವೇ ಸರಿ, ದೇವಾಲಯಗಳ ಉಗಮ ಬೆಳವಣಿಗೆ, ಇತ್ಯಾದಿಗಳನ್ನು ತಿಳಿಯಲು ಬೇಕಾದರೆ 'ಮನಸಾರೆ', 'ಮಯಮತ'ದಂಥ ಗ್ರಂಥಗಳು ದೇವಾಲಯಗಳ ಬಗೆಗೆ ವಿಶೇಷ ವಿವರಗಳನ್ನು ನೀಡುತ್ತವೆ.

ಪ್ರಾಚೀನ ಭಾರತದ ವಾಸ್ತು ಶಿಲ್ಪ ಚರಿತ್ರೆಯಲ್ಲಿ ದೇವಾಲಯಗಳ ಸ್ಪಷ್ಟ ಚಿತ್ರಣ ನಮಗೆ ಶಿಲಾಯುಗದ ಜನರ ಪ್ರಕೃತಿ ಪೂಜೆ, ಮತ್ತು ಸಮಾಧಿ ಪೂಜೆಗಳಿಂದ ಸಿಗುತ್ತದೆ. ಕ್ರಮೇಣ ಈ ಪೂಜೆಗಳು ಪ್ರತಿಮಾ ರೂಪ ಪಡೆದು ಗುಂಪಿನ ಆರಾಧನೆಗಾಗಿ ದೇವಾಲಯಗಳು ನಿರ್ಮಾಣಗೊಂಡಿರಬೇಕು. ಮನುಷ್ಯನು ಪ್ರಾಣಿ ವರ್ಗದಿಂದ ಬೇರ್ಪಟ್ಟು ತಲೆಎತ್ತಿನಿಂತಾಗಲೇ ಧರ್ಮವು ಅವನ ನೆರವಿಗೆ ಬಂತು. ಧರ್ಮದ ಹುಟ್ಟಿಗೆ ಭಯವು ಒಂದು ಮೂಲಕಾರಣವಾಯಿತು. ಆದಿಮಾನವನು ನಿಸರ್ಗದ ಮಡಿಲಲ್ಲಿ ಅಡಗಿರುವ ವೈಚಿತ್ರ್ಯ ಅದ್ಭುತಗಳನ್ನು ಭಯವಿಸ್ಮಿತನಾಗಿ ದಿಗ್ಭ್ರಾಂತಗೊಂಡು, ಅವನಲ್ಲಿ ಭಯವೂ ಮೂಡಿತು. ಪ್ರಕೃತಿಯಲ್ಲಿ ಯಾವುದೇ ಶಕ್ತಿ ಅಡಗಿದೆಯೆಂದು ಅರಿವಾಗಿ, ಅದರ ವಿಚಾರದಲ್ಲಿ ಪೂಜ್ಯಭಾವನೆ ಮೂಡಿತು. ಈ ಕಾರಣದಿಂದಲೇ ಗಿಡ, ಮರ, ನದಿ ಇತ್ಯಾದಿಗಳು ಪೂಜ್ಯನೀಯವಾದುದಲ್ಲದೆ, ಪೂಜ್ಯ ಸ್ಥಾನಗಳಾದವು.

ಅಪೂರ್ವ, ಅದ್ಭುತ, ದಿವ್ಯವೆಂದಾದುದನ್ನು ಅನುಭವಿಸುವ ಸಾಮರ್ಥ್ಯವಿರುವಂತೆಯೇ ಮನುಷ್ಯನಿಗೆ ಅದರ ಪ್ರಕೃತಿಗಳನ್ನು ಕಲ್ಪಿಸಿಕೊಳ್ಳುವ ಹವ್ಯಾಸವು ನಿಸರ್ಗಸಿದ್ಧವಾದುದೇ, ಧರ್ಮದ ನೆಲೆಯಲ್ಲಿ ಪ್ರತಿ ಕೃತಿಗಳ ಬಳಕೆಯ ಮುನ್ನ ಪ್ರಕೃತಿಸಿದ್ಧವಾದ ಪ್ರತಿಮೆಗಳನ್ನು ಬಳಸುವ ಪದ್ದತಿ ಇದ್ದೀತು. ಇದಲ್ಲದೆ ಇನ್ನೊಂದು ಬಗೆಯ ಧಾರ್ಮಿಕ ಕಲ್ಪನೆಯು ಒಡೆ ಮೂಡಿತು. ಆದಿ ಮಾನವನು ಬೇಟೆಗೆ ಹೊರಡುವ ಮುನ್ನ ಗುಹೆಯೆದುರು ಚಿತ್ರಮಂಡಲವೊಂದನ್ನು ಬರೆದು, ಅದರ ನಡುವೆ ತನಗೆ ಬೇಕಾದ ಪ್ರಾಣಿಯ ಆಕಾರವನ್ನು ಸ್ಥೂಲವಾಗಿ ಬರೆದು ಅದರ ಮೈಮೇಲೆ ಬಾಣವೊಂದು

ನಾಟಿದಂತೆ ಗುರುತಿಸಿ ಬೇಟೆಗೆ ಹೊರಡುತ್ತಿದ್ದ. ಪ್ರಾಣಿಯೊಂದರ ಚರ್ಮವೊಂದನ್ನು ಮೈಮೇಲೆ ಧರಿಸಿಹೊರಟರೆ, ಹಿಡಿದ ಕೆಲಸದಲ್ಲಿ ಜಯ ಎಂಬ ನಂಬಿಕೆ ಕಾಕತಾಳಿಯವಾಗಿ, ಆದಿನ ಜಯ ಒದಗಿದರೆ ಅದಕ್ಕೆ ಕಾರಣ ಆ ಚರ್ಮ ಪದಾರ್ಥ ಎಂಬ ನಂಬಿಕೆ ಬೇರೂರಿತು. ಮುಂದೆ ಯಾವ ಕೆಲಸಕ್ಕೆ ಹೋದರೂ ಈ ಪಾದರ್ಥಸಿದ್ದ, ಅದನ್ನು ಇರಿಸಿದ ಸ್ಥಳವೇ ದೇಗುಲವಾಯಿತು. ಮುಂದೆ ಇದರ ರಕ್ಷಣೆಗೆ ಕಟ್ಟಿದ ಕಟಕಟೆಯೇ ದೇಗುಲವಾಗಿ ಬೆಳವಣಿಗೆ ಹೊಂದಿತು.[೨] ಹೀಗಾಗಿ ಆದಿ ಮಾನವನು ತನಗೆ ನೆರವಾಗುವ ಪ್ರತಿಮೆಯನ್ನು ಇಟ್ಟ ಸ್ಥಳ ಅದರ ಸುತ್ತಲೂ ಕಟ್ಟಿದ ಕಟ್ಟಡ ಹಾಗೂ ಅದರ ಸುತ್ತ ಇರುವ ಪ್ರದೇಶವೂ ಪವಿತ್ರವಾಯಿತು.

ಕರ್ನಾಟಕದಲ್ಲಿ ವಾಸ್ತು ಶಿಲ್ಪದ ಬೆಳವಣಿಗೆಯು ಶಾತವಾಹನರ ಕಾಲದ ಬೌದ್ಧ ಧರ್ಮದ ಚೈತ್ಯ ಸ್ತೂಪ, ವಿಹಾರಗಳೊಂದಿಗೆ ಕಂಡುಬರುತ್ತವೆ. ಬ್ರಹ್ಮಗಿರಿ, ಬನವಾಸಿ, ಸನ್ನತಿ ಮುಂತಾದೆಡೆಗಳಲ್ಲಿ ಪ್ರಾಚೀನ ವಾಸ್ತು ರಚನೆಗಳನ್ನು ನೆನೆಯಬಹುದು. ಬಾದಾಮಿ ಚಾಲುಕ್ಯರ ಕಾಲದಿಂದ ಕರ್ನಾಟಕದಲ್ಲಿ ದೇವಾಲಯಗಳ ನಿರ್ಮಾಣವು ಹೆಚ್ಚಾಯಿತು. ಮಹಾಕೂಟ-ಬಾದಾಮಿ-ಐಹೊಳೆ-ಪಟ್ಟದಕಲ್ಲುಗಳಲ್ಲಿ ಈ ಪ್ರಾಚೀನ ದೇವಾಲಯಗಳ ನಿರ್ಮಿತಿಯನ್ನು ಕಾಣಬಹುದು, ರಾಷ್ಟ್ರಕೂಟರ ದೇವಾಲಯಗಳು ವಿಶೇಷವಾಗಿ ಎಲ್ಲೋರ, ಕುಕ್ಕನೂರು, ಶೀರ್‌ನಾಳ್, ರೋಣ ಮುಂತಾದ ಸ್ಥಳಗಳಲ್ಲಿ ಕಂಡುಬರುತ್ತವೆ. ಕುರುವತ್ತಿ, ಗದಗ, ಲಕ್ಕುಂಡಿಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಕಂಡುಬರುವಂತ ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ ಇವರ ಕಾಲದ ದೇವಾಲಯಗಳಿವೆ, ಹೊಯ್ಸಳರ ಕಾಲದ ದೇವಾಲಯಗಳಿಗೆ ದಕ್ಷಿಣ ಕರ್ನಾಟಕವು ಮುಖ್ಯ ನೆಲೆಯಾಗಿದ್ದು, ಬೇಲೂರು, ಹಳೇಬೀಡು, ಸೋಮನಾಥಪುರಗಳು ಇವರ ಕಾಲದ ದೇವಾಲಯಗಳಿಗೆ ಪ್ರಸಿದ್ಧವಾಗಿವೆ. ಗಂಗರ ಕಾಲದ ದೇವಾಲಯಗಳನ್ನು ಬೇಗೂರು, ಮಣ್ಣೆ, ಕೋಲಾರದಲ್ಲೂ, ನೊಳಂಬರ ಕಾಲದ ದೇವಾಲಯಗಳನ್ನು ಆವನಿ, ಹೇಮಾವತಿಯಲ್ಲೂ, ವಿಜಯನಗರ ಕಾಲದ ದೇವಾಲಯಗಳನ್ನು ಹಂಪೆಯಲ್ಲಿ ಮುಖ್ಯವಾಗಿ ಕಾಣಬಹುದು.[೩]

ಮೋರಿಗೇರಿ ಗ್ರಾಮದ ಶಾಸನ ಉಲ್ಲೇಖಿತ ದೇವಾಲಯದಲ್ಲಿ ಕ್ರಿ.ಶ. ೧೦೪೫ರ ಶಾಸನವು[೪] ಚಾಲುಕ್ಯ ದೊರೆ ಆಹವಮಲ್ಲದೇವನು ರಾಜ್ಯಭಾರ ಮಾಡುತ್ತಿದ್ದಾಗ. ಇವನ ಸಾಮಂತ ನೊಳಂಬ ಘಟೆಯಂಕಕಾರನ ಮಗ ಉದಯಾದಿತ್ಯ ಇವನ ಮಗ ಜಗದೇಕಮಲ್ಲ ಇರ್ಮಡಿನೊಳಂಬ, ಇವನ ತಮ್ಮ ತ್ರೈಲೋಕ್ಯಮಲ್ಲನನ್ನಿನೊಳಂಬ ಪಲ್ಲವ ಪೆರ್ಮಾಡಿಯು ಬಲ್ಲಕುಂದೆ-೩೦೦, ಕೋಗಳಿ-೫೦೦, ಕದಂಬಗಳಿಗೆ೧೦೦೦, ಕುದಿಯ ಹರವಿ-೭೦, ಕರಿವಿಡಿ-೭೦ ಮತ್ತು ನೋಳಂಬವಾಡಿ ೩೨೦೦ವನ್ನು ಆಳುತ್ತಿರಲು. ದಂಡನಾಯಕ ತಿಕಣ್ಣ ಪ್ರಮುಖವಾಗಿ ಲೆಂಕ ಸಾಸಿರ್ವರು ಅಮ್ಮಳೆ, ನೆಲ್ಲಿಕುದಿರು, ಸೊನ್ನ, ಪೊಳಲ್ಗುಂದೆ, ಸೂಗೂರು, ಮೋರಿಗೇರೆ ಮೊದಲಾದ ಆರು ಗ್ರಾಮಗಳನ್ನು ಆಳುತ್ತಿರಲು ಉದಾಯಾದಿತ್ಯನಿಗೆ

ಪರೋಕ್ಷ ವಿನಯವಾಗಿ ೨೪ ಜನಾಂಗ ಛತ್ರವನ್ನು ನೊಳಂಬೇಶ್ವರ ಮತ್ತು ಲೆಂಕೇಶ್ವರವನ್ನು ಮಾಡಿಸಿ ಅವುಗಳ ಪೂಜೆಗೆ ಹಾಗೂ ವಿದ್ಯಾದಾನಕ್ಕೆ ಅರಸನಿಂದ ಸವಂಟಿಯ ಪಾಳನ್ನು ಪಡೆದು ಹಾಗೂ ಅದಕ್ಕೆ ಶಿವಪುರವೆಂದು ಹೆಸರಿಟ್ಟರು. ರಾಜನು ಪೂವಿನಪಡಂಗಿಲೆಯ ನೆಲೆವೀಡಿಲ್ಲಿದ್ದಾಗ ಘಟ್ಟಯರಸನು ಕೋಗಳಿಯ ಮಠದ ಮಳೆಯಾಳ ಪಂಡಿತನ ಶಿಷ್ಯನಾದ ಜ್ಞಾನೇಶ್ವರ ಪಂಡಿತ ಅವನ ಶಿಷ್ಯನಾದ ಸೋಮೇಶ್ವರ ಪಂಡಿತನ ಕಾಲನ್ನು ತೊಳೆದು ದಾನ ನೀಡುತ್ತಾನೆ. ಚಟ್ಟರಸ, ಘಟ್ಟಿಯರಸ, ಸೇನಬೋವ ಗೋವಿಂದಯ್ಯನು ವಿದ್ಯಾದಾನಕ್ಕೆ, ಸೂಳವಾಳಂಗೆ, ಕೊಳಲು ನುಡಿಸುವವನಿಗೆ, ಪರಕಾರಿನಿಗೆ, ಸೂಳೆಯರಿಗೆ, ಕಲ್ಲುಗಟಿಗ, ಮುಚ್ಚೋಜ ಮುಂತಾದವರಿಗೆ ಭೂದಾನ ನೀಡಿದ ಉಲ್ಲೇಖವಿದೆ.

ಕ್ರಿ.ಶ. ೧೦೪೬ ರ ಶಾಸನ[೫] ಕಲ್ಯಾಣದ ಚಾಳುಕ್ಯ ಅರಸ ತ್ರೈಲೋಕ್ಯಮಲ್ಲದೇವನು ಆಳುತ್ತಿದ್ದಾಗ ಇವನ ಸಾಮಂತನಾದ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾಡಿನಡಿಯು ಬಲ್ಲಕುನ್ದೆ-೩೦೦, ಕೋಗಳಿ೫೦೦, ಕದಂಬಗಳಿಗೆ-೧೦೦೦, ಕುದಿಯಹರವಿ-೭೦, ಕರಿವಿಡಿ-೩೦. ಐದು ಗ್ರಾಮಗಳು, ನೊಳಂಬವಾಡಿ-೩೨೦೦ವನ್ನು ಆಳುತ್ತಿದ್ದಾಗ, ಇವನ ದಂಡ ನಾಯಕ ತಿಕಣ್ಣನೇ ಮೊದಲಾಗಿ ಲೆಂಕಸಾರ್ಸಿರು ಅರ್ಮ್ಮಳೆ, ನೆಲ್ಕುದುರೆ, ಸೊನ್ನ, ಪೊಳಲ್ಗುಗ್ಗೆ, ಸೂಗೂರು, ಮೋರಿಗೆರೆ ಮೊದಲಾದ ಆರು ಊರುಗಳನ್ನು ಆಳುತ್ತಿದ್ದಾಗ ಮೋರಿಗೇರಿಯನ್ನು ಬಲ್ಲವರಸನ ಕೈಲಿ ಪಡೆದು ನೊಳಂಬೇಶ್ವರ ದೇವರಿಗೆ ವಿದ್ಯಾಭ್ಯಾಸಕ್ಕಾಗಿ, ಪಾದಮೂಲ ಪರಿವಾರ ಮುಂತಾದವುಕ್ಕೆ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು, ವಿರೂಪಾಕ್ಷ ದೇವರ ಸಮಕ್ಷಮದಲ್ಲಿ ದಾನ ನೀಡುತ್ತಾರೆ. ದಂಡನಾಯಕ ಸೋವಿಮಯ್ಯ ಬಾವಿಯನ್ನು ಕಟ್ಟಿಸಿ ಅದಕ್ಕೆ ಸೋಮತೀರ್ಥವೆಂದಂ ಹೆಸರಿಟ್ಟು, ಕೆರೆ, ಬಾವಿ, ತೋಟವನ್ನು ದಾನ ಕೊಟ್ಟ ವಿಷಯ ತಿಳಿಸುತ್ತದೆ.

ಕ್ರಿ.ಶ. ೧೦೬೪ರ ಶಾಸನದಲ್ಲಿ[೬] ವೆಂಗಿ ಮಂಡಲೇಶ್ವರ ಶ್ರೀ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯನು ನೊಳಂಬವಾಡಿ-೩೨೦೦ವನ್ನು ಆಳುತ್ತಿದ್ದಾಗ ದಕ್ಷಿಣ ದಿಕ್ಕಿನ ದಿಗ್ವಿಜಾಯರ್ಥವಾಗಿ ಬಂದಾಗ ಮೊರಿಂಗೆರೆಯ ನೊಳಂಬೇಶ್ವರ ದೇವರ.................. ಪಂಡಿತರ ಕಾಲನ್ನು ತೊಳೆದು ಪಾರಮೇಶ್ವರ ದತ್ತಿಯಾಗಿ ದಾನ ಮಾಡಿದ ವಿಷಯ ಗೊತ್ತಾಗುತ್ತದೆ.

ಕ್ರಿ.ಶ.೧೦೮೨ರ ಶಾಸನದಲ್ಲಿ[೭] ರಾಜಗುರು ವಾಮರಾಸಿದೇವನು ಬೋವರ್ಸನ ಬಾವಿಗೆ ೧೨ ಮತ್ತರು ಭೂಮಿದಾನ ಮಾಡಿದ ಉಲ್ಲೇಖ ಕಂಡುಬರುತ್ತದೆ.

ಇಲ್ಲಿ ಉಲ್ಲೇಖಿತವಾಗಿರುವ ಶಾಸನದಲ್ಲಿ ಕ್ರಿ.ಶ. ೧೦೪೫ರಲ್ಲಿ ನೊಳಂಬೇಶ್ವರ ಹಾಗೂ ವಿರೂಪಾಕ್ಷ ದೇವಾಲಯಗಳನ್ನು ಬಿಟ್ಟರೆ ಉಳಿದ ಯಾವುದೇ ದೇವಾಲಯಗಳು ಕಂಡುಬರುವುದಿಲ್ಲ. ಆದರೆ ಈಗ್ರಾಮದ ಬಸವೇಶ್ವರ ದೇವಾಲಯ, ಆಂಜನೇಯ

ದೇವಾಲಯ, ಕಲ್ಲೇಶ್ವರ ದೇವಾಲಯವನ್ನಿಟ್ಟು ಕೊಂಡು ಶೈವ, ವೈಷ್ಣವ, ಜೈನ ಎಂದು ವಿಭಾಗಿಸಿ ಅಧ್ಯಯನ ಮಾಡಲಾಗಿದೆ.

## ಶೈವ ದೇವಾಲಯಗಳು

**ಕಲ್ಲೇಶ್ವರ ದೇವಾಲಯ :-** ಮೋರಗೆರೆ ಗ್ರಾಮದ ಮಧ್ಯದಲ್ಲಿರುವ ಕಲ್ಲೇಶ್ವರ ದೇವಾಲಯವು ಎತ್ತರವಾದ ಜಗಲಿಯ ಮೇಲೆ ನಿರ್ಮಾಣವಾಗಿದೆ. ಈ ದೇವಾಲಯವು ವಿಶಾಲವಾದ ಸಭಾಮಂಟಪ ಮತ್ತು ವಿಶಾಲವಾದ ಅಂತರಾಳವನ್ನು ಹೊಂದಿದೆ. ಸಭಾಮಂಟಪದ ಅಂತರಾಳ ಪ್ರದೇಶದ ಮುಂದಿನ ಸಾಲಿನಲ್ಲಿರುವ ಕಂಬಗಳು ಕೆಳಗೆ ಮತ್ತು ಮೇಲೆ ಚೌಕಾಕಾರವಿದ್ದು ಮಧ್ಯ ವೃತ್ತಾಕಾರದಲ್ಲಿದ್ದು ಮೇಲ್ಭಾಗ ವೃತ್ತಾಕಾರದ ಫಲಕ ಹಾಗೂ ಚೌಕಾಕಾರದ ಭೋದಿಗೆಗಳಿಂದ ಕೂಡಿವೆ. ಮುಂದಿನ ಭಾಗ ಒಂದು ಸಾಲಿನಲ್ಲಿರುವ ಕಂಬಗಳು ಚೌಕಾಕಾರ, ಮಧ್ಯ ನಕ್ಷತ್ರಾಕಾರ ಮತ್ತು ಮೇಲೆ ವೃತ್ತಾಕಾರವಾಗಿದೆ. ಈ ದೇವಾಲಯವು ಒಟ್ಟು ೫೦ಅಡಿ ಉದ್ದ ೩೦ಅಡಿ ಅಗಲವಾಗಿದೆ. ವಿಶಾಲವಾದ ಸಭಾಮಂಟಮಪದಲ್ಲಿ ಸುಮಾರು ೨೮ ಕಂಬಗಳಿವೆ.

ಗರ್ಭ ಗೃಹದ ಪ್ರವೇಶದ್ವಾರವನ್ನು ಹೂ-ಬಳ್ಳಿಗಳಿಂದ ಅಲಂಕರಿಸಲಾಗಿದ್ದು. ಶೈವದ್ವಾರ ಪಾಲಕರ ಉಬ್ಬು ಶಿಲ್ಪಗಳು, ಕೆಳಭಾಗ ಇಳಿಬಿದ್ದ ಪದ್ಮದ ಗುಚ್ಛಗಳು, ಮೇಲ್ಭಾಗ ರೇಖಾನಗರ ಶಿಖರಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಮತ್ತು ಪಾರ್ಶ್ವದಲ್ಲಿ ಅರ್ಧಗಂಬಗಳಿವೆ. ಅಂತರಾಳದ ಮಧ್ಯ ಚೌಕಾಕಾದಲ್ಲಿದ್ದು ಫಲಕ ಬೋದಿಗೆಗಳಿಂದ ಕೂಡಿವೆ. ಗರ್ಭಗೃಹದಲ್ಲಿ, ಪ್ರತಿಸ್ಥಾಪಿಸಿದ ಈಶ್ವರಲಿಂಗ ಸುಮಾರು ೫ ಅಡಿ ಎತ್ತರದ ಲಿಂಗವಿದೆ. ( ಮೋರಗೆರೆಯಲ್ಲಿ ಪಂಚಲಿಂಗಗಳು ಇವೆ. ಇದು ಒಂದು) ದೇವಾಲಯದ ಅಧಿಷ್ಠಾನವು ಉಪಾನ, ಜಗಲಿ, ಕಂಠ, ಕುಮುದ ಪಟ್ಟಿಕೆಗಳನ್ನೊಳಗೊಂಡಿದೆ. ಗೋಡೆಗೆ ಅಂಟಿಕೊಂಡಿರುವ ಕಂಬಗಳು, ಅವುಗಳಿಗೆ ಬೋದಿಗೆ, ಈ ಲಕ್ಷಣಗಳಿಂದ ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದೆ. ಈ ದೇವಾಲಯ ಪೂರ್ವಾಭಿಮುಖವಾಗಿದೆ. ಈ ದೇವಾಲಯವನ್ನು ಕಪ್ಪು ಮಿಶ್ರಿತನೀಲಿ ಛಾಯೆಯ ಬಳಪದ ಕಲ್ಲಿನಲ್ಲಿ ನಿರ್ಮಿಸಲಾಗಿದೆ.

## ಬಸವೇಶ್ವರ ದೇವಾಲಯ

ಈ ದೇವಾಲಯವು ಮೋರಗೆರೆ ಗ್ರಾಮದಿಂದ ಪೂರ್ವಕ್ಕೆ, ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯವು ಕ್ರಿ.ಶ. ಸು ೧೮ ನೇಯ ಶತಮಾನದಲ್ಲಿ ನಿರ್ಮಿಸಲಾಗಿದೆ. ಇಲ್ಲಿಯ ಜನರ ಅಭಿಪ್ರಾಯದಂತೆ ಕೆಲವು ವರ್ಗದವರು ತಮ್ಮದೇ ಆದ ದೇವಾಲಯಗಳನ್ನು ನಿರ್ಮಿಸಿಕೊಂಡಿರುವುದು ತಿಳಿದು ಬರುತ್ತದೆ. ಈ ದೇವಾಲಯದಲ್ಲಿ ಎಲ್ಲಿಯೂ ಕಂಬಗಳು ಕಂಡುಬರುವುದಿಲ್ಲ, ಸುಮಾರು ಈ ದೇವಾಲಯದ ವಿಸ್ತೀರ್ಣ ೨೦ ಅಡಿ ಉದ್ದ ೧೦ ಅಡಿ ಅಗಲವಾಗಿದೆ. ಈ ದೇವಾಲಯದಲ್ಲಿ ಗರ್ಭಗೃಹವು ಎತ್ತರವಾದ ಜಗಲೆಯ

ಮೇಲೆ ಸಭಾಮಂಟಪಗಳನ್ನು ನಿರ್ಮಿಸಲಾಗಿದೆ. ಗರ್ಭ ಗೃಹದಲ್ಲಿ ನಂದಿಶಿಲ್ಪವನ್ನು ಪ್ರತಿಷ್ಠಪಿಸಲಾಗಿದೆ. ತೆರೆದ ಸಭಾಮಂಟಪದಲ್ಲಿ ಜಾಲಂಧರಗಳು, ಇದರ ಪ್ರವೇಶಕ್ಕೆ ಸೋಪಾನಗಳನ್ನು ಜೋಡಿಸಲಾಗಿದೆ. ಈ ದೇವಾಲಯದ ಕೈಪಿಡಿ ಗೋಡೆಯ ದೇವ ಕೋಷ್ಠಕದಲ್ಲಿ ಶಿವಲಿಂಗ; ನಾಲ್ಕು ಮೂಲೆಗಳಿಗೆ ವಿರುದ್ಧ ದಿಕ್ಕಿನಲ್ಲಿ ನಂದಿ ಶಿಲ್ಪಗಳಿವೆ. ಇದನ್ನು ಕಣ ಶಿಲೆಯಿಂದ ನಿರ್ಮಿಸಲಾಗಿದೆ. ಇದೇ ಮಾದರಿಯ ಇನ್ನೊಂದು ಬಸವೇಶ್ವರ ದೇವಾಲಯ ವಿದೆ. ಇದು ಕೂಡ ಪಶ್ಚಿಮಾಭಿಮುಖವಾಗಿ ಇದೆ. ಮೋರಗೆರೆಯಲ್ಲಿ ಒಂದೇ ತೆರನಾದ ಎರಡುರಡು ದೇವಾಲಯಗಳನ್ನು ಕಾಣುತ್ತೇವೆ.

## ಉದ್ದಿ ಬಸವೇಶ್ವರ ದೇವಾಲಯ

ಗ್ರಾಮದ ಹೊರಗಡೆರುವ ಈ ದೇವಾಲಯವು ಸುಮಾರು ಹತ್ತು ಅಡಿ ಎತ್ತರದ ಜಗಲೆಯ ಮೇಲೆ ನಿರ್ಮಾಣವಾಗಿದೆ. ಈ ದೇವಾಲಯವು ಗರ್ಭಗೃಹ,ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಪ್ರವೇಶ ದ್ವಾರ ಅಲಂಕೃತ ಹೂ ಬಳ್ಳಿಗಳು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಮತ್ತು ಮೇಲ್ಭಾಗದಲ್ಲಿ ಶಿವನ ಹತ್ತು ಉಬ್ಬು ಶಿಲ್ಪಗಳಿವೆ. ಒಳಗೆ ನಟರಾಜನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ತೆರೆದ ಸಭಾಮಂಟಪದಲ್ಲಿ ಕಲ್ಯಾಣ ಚಾಲುಕ್ಯ ಮಾದರಿಯ ಕಂಬಗಳಿವೆ. ಇದಕ್ಕೆ ದಕ್ಷಿಣ ಹಾಗೂ ಉತ್ತರ ದಿಕ್ಕುಗಳಿಗೂ ಪ್ರವೇಶ ದ್ವಾರಗಳಿವೆ. ಈ ದೇವಾಲಯದ ಮುಖ ಮಂಟಪದಲ್ಲಿ ಎರಡು ಶಾಸನಗಳು ಇವೆ. ಜೊತೆಗೆ ಗರ್ಭಗುಡಿಯಲ್ಲಿರುವ ಈಶ್ವರ ಲಿಂಗದ ಎದರು ನಂದಿ ಶಿಲ್ಪವಿದೆ. ಇತ್ತೀಚೆಗೆ ಹೊಸದಾದ ಸುಮಾರು ೫ ಅಡಿ ಎತ್ತರದ ನಂದಿ ಶಿಲ್ಪವನ್ನು ನಿರ್ಮಿಸಿದ್ದಾರೆ.

ಈ ದೇವಾಲಯಕ್ಕೆ ಹೊಂದಿಕೊಂಡು ಉತ್ತರ ಭಾಗದಲ್ಲಿ ಇನ್ನೊಂದು ದೇವಾಲಯ ವಿದೆ. ಇದು ಗರ್ಭಗೃಹ, ಅಂತರಾಳ, ಹಾಗೂ ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಇದರ ಪ್ರವೇಶ ದ್ವಾರ ಸಾದ ಕೆತ್ತನೆಯಿಂದ ಕೂಡಿದೆ. ಸಭಾ ಮಂಟಪದಲ್ಲಿ ಕಲ್ಯಾಣ ಚಾಲುಕ್ಯ ಮಾದರಿಯ ಕಂಬಗಳಿವೆ. ಉತ್ತರ ಹಾಗೂ ದಕ್ಷಿಣ ದಿಕ್ಕುಗಳಿಗೂ ಪ್ರವೇಶ ದ್ವಾರಗಳಿವೆ. ಈ ಎರಡೂ ದೇವಾಲಯಗಳನ್ನು ಕಪ್ಪು ಶಿಲೆಯಲ್ಲಿ ನಿರ್ಮಿಸಲಾಗಿದೆ. ಇಲ್ಲಿರುವ ಶಾಸನದಲ್ಲಿ ನೊಳಂಬೇಶ್ವರ ಹಾಗೂ ವಿರುಪಾಕ್ಷ ದೇವಾಲಯಗಳನ್ನು ನಿರ್ಮಿಸಿದ ಉಲ್ಲೇಖವಿದೆ. ಈ ದೇವಾಲಯಕ್ಕೆ ಸುತ್ತುವರಿದು ತಡೆಗೋಡೆ ಇದೆ. ಈ ದೇವಾಲಯದ ವಿಸ್ತೀರ್ಣ ೫೦ ಅಡಿ ಉದ್ದ, ೧೦೦ ಅಡಿ ಅಗಲವಿದೆ ಈ ದೇವಾಲಯಕ್ಕೆ ಅಂಟಿಕೊಂಡು ಪೂರ್ವಕ್ಕೆ ರುದ್ರ ಭೂಮಿ ಇದೆ. ಈ ಭೂಮಿಯಲ್ಲಿ ವೀರಶೈವ ಲಿಂಗಾಯತ ಜನರನ್ನು ಶವ ಸಂಸ್ಕಾರ ಮಾಡಲು ಮಾತ್ರ ಅವಕಾಶವಿದೆ ಒಟ್ಟು ಈ ದೇವಾಲಯದಲ್ಲಿ ೩೦ ಕಂಬಗಳಿವೆ.

### ವೈಷ್ಣವ ದೇವಾಲಯಗಳು

ಮೋರಗೆರೆ ಗ್ರಾಮದಲ್ಲಿರುವ ದೇವಾಲಯಗಳಲ್ಲಿ ವೈಷ್ಣವ ದೇವಾಲಯಗಳು ಲಭ್ಯವಿಲ್ಲ. ವೈಷ್ಣವ ಧರ್ಮವೂ ಅಲ್ಲಿ ಪ್ರಚಲಿತದಲ್ಲಿದ್ದುದನ್ನು ಶಾಸನಗಳು ತಿಳಿಸುತ್ತವೆ. ಆದರೆ ಈ ಧರ್ಮ ಅಷ್ಟೊಂದು ಪ್ರಬಲವಾಗಿದ್ದಿಲ್ಲ. ಮುಂದೆ ವಿಜಯನಗರ ಅರಸರ ಕಾಲದಲ್ಲಿ ಈ ಧರ್ಮಕ್ಕೆ ರಾಜಾಶ್ರಯ ಸಿಕ್ಕು ಎಲ್ಲೆಡೆ ತನ್ನ ಪ್ರಭಾವವನ್ನು ಬೀರಿದ್ದುದು ಸ್ಪಷ್ಟ ವಿಜಯನಗರ ಸಾಮ್ರಾಜ್ಯದ ಸಂಗಮ ವಂಶದವರ ನಂತರ ಆಳಿದ ಅರಸರೆಲ್ಲ ವೈಷ್ಣವ ಧರ್ಮಕ್ಕೆ ತಮ್ಮ ಒಲವು ತೋರಿಸಿದ್ದಾರೆ. ಒಟ್ಟಾರೆ ಮೋರಗೆರೆಯಲ್ಲಿ ವೈಷ್ಣವ ಧರ್ಮದ ಬಗ್ಗೆ ಉಲ್ಲೇಖಗಳಿಲ್ಲ.

### ಜೈನ ಬಸದಿಗಳು

ಪ್ರಾಚೀನ ಕಾಲದಲ್ಲಿ ಜೈನ ಧರ್ಮವು ಒಂದು ಪ್ರಭಾವಯುತವಾದ ಧರ್ಮವಾಗಿತ್ತು ರಾಜಾಶ್ರಯವನ್ನು ಪಡೆದಿದ್ದ ಈ ಧರ್ಮವು ಬಳ್ಳಾರಿ ಜಿಲ್ಲೆಯಲ್ಲೂ ಸಾಕಷ್ಟು ಬೇರೂರಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ.

### ಬ್ರಹ್ಮ ದೇವಾಲಯ

ಮೋರಿಗೆರೆ ಗ್ರಾಮದಲ್ಲಿ ಕಂಡು ಬರುವ ಇನ್ನೊಂದು ದೇವಾಲಯವು ಕ್ರಿಶ ಸು ೧೨ ನೇಯ ಶತಮಾನದಲ್ಲಿ ಕಲ್ಯಾಣ ಚಾಲುಕ್ಯ ಅರಸರಿಂದ ನಿರ್ಮಿತವಾಗಿದೆ. ಈ ದೇವಾಲಯ ಮೂಲತಃ ಜೈನ ಬಸದಿಯಾಗಿದ್ದು ಕಾಲಕ್ರಮೇಣ ಶಿವ ದೇವಾಲಯಗಳಾಗಿ ಪರಿವರ್ತನೆಗೊಂಡಿರುವುದು ಕಂಡು ಬರುತ್ತದೆ. ಈ ದೇವಾಲಯದಲ್ಲಿ ವಿಶಾಲ ಪ್ರಾಕಾರದ ಮಧ್ಯ ಭಾಗದಲ್ಲಿ ಎತ್ತರವಾದ ಜಗಲೆಯ ಮೇಲೆ ಈ ದೇವಾಲಯವಿದೆ. ಇದರಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ದ್ವಾರ ಮಂಟಪಗಳಿವೆ. ಅಂತರಾಳ ಪ್ರದೇಶದ ಮತ್ತು ಸಭಾ ಮಂಟಪದಲ್ಲಿ ಚಾಲುಕ್ಯ ಮಾದರಿಯ ೧೫ ಕಂಬಗಳಿವೆ. ಪ್ರವೇಶ ದ್ವಾರದಲ್ಲಿ ಎಡ ಮತ್ತು ಬಲಕ್ಕೆ ಅನೆಯ ಶಿಲ್ಪಗಳಿವೆ. ಒಂದು ಸ್ತಂಭ ಇದೆ. ಈ ದೇವಾಲಯದ ಬಲಗಡೆ ಬಾವಿ ಇದೆ ಈ ದೇವಾಲಯದ ಒಟ್ಟು ವಿಸ್ತೀರ್ಣ ೧೨೦ ಅಡಿ ಉದ್ದ ೭೦ ಅಡಿ ಅಗಲ ವಿದೆ. ಈಗ ಈ ದೇವಾಲಯವನ್ನು ಹೊಸದಾಗಿ ಜೀರ್ಣೋದ್ಧಾರ ಮಾಡಿದ್ದಾರೆ. ಈ ದೇವಾಲಯದಲ್ಲಿ ಯಕ್ಷಿಯ ವಿಗ್ರಹಗಳು ಮತ್ತು ತೀರ್ಥಂಕರರ ಶಿಲ್ಪ ಇದ್ದವು ಎನ್ನುವುದು ಈ ಊರಿನ ಪೂರ್ವಜರ ಅಭಿಪ್ರಾಯ. ಗರ್ಭಗೃಹದೊಳಗೆ ಬ್ರಹ್ಮ ಹಾಗೂ ಪದ್ಮಾವತಿಯ ಮೂರ್ತಿಗಳಿವೆ. ಗರ್ಭಗೃಹದ ಪ್ರವೇಶದ್ವಾರವು ಸಾದಾಕೆತ್ತನೆಯಿಂದ ಕೂಡಿದೆ. ಮೇಲೆ ಚಿಕ್ಕ ಪ್ರಮಾಣದ ಶಿಖರವಿದೆ. ಅದರಲ್ಲಿ ಸ್ತೂಪಿ ಹಾಗೂ ಕಳಸಗಳಿವೆ. ಇದನ್ನು ಕಣಶಿಲೆಯಿಂದ ನಿರ್ಮಿಸಲಾಗಿದ್ದು, ಇದರ ಶಿಖರ ಮತ್ತು ದ್ವಾರ ಮಂಟಪದ ಗೋಪುರಗಳು ಮಾತ್ರ ಇಟ್ಟಿಗೆ ಹಾಗೂ

ಗಾರೆಯಿಂದ ನಿರ್ಮಾಣವಾಗಿದೆ. ಈ ದೇವಾಲಯದ ಸುತ್ತಲೂ ಯಾವುದೇ ರೀತಿಯ ತಡೆಗೋಡೆ ಇರುವುದಿಲ್ಲ. ಇದು ಜೈನ ಬಸದಿಯಾಗಿತ್ತೆನ್ನುವುದಕ್ಕೆ ಆಕರಗಳಿವೆ ಈ ಬಸದಿ ಉತ್ತರಾಭಿಮುಖವಾಗಿದ್ದು, ೧೩ನೇ ಶತಮಾನದಲ್ಲಿ ಕರ್ನಾಟಕದಾದ್ಯಂತ ಶಿವನ ದೇವಾಲಯಗಳಾಗಿ ಪರಿವರ್ತನೆಗೊಂಡಿರುವುದು ಕಂಡು ಬರುತ್ತದೆ. ಆದರೆ ಅಂದಿನದಿಂದಲೂ ಜೈನರ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವುದು ಇದರ ವೈಶಿಷ್ಟ್ಯ

## ಇತರೆ ದೇವಾಲಯಗಳು

### ಆಂಜನೇಯ ದೇವಾಲಯ

ಮೋರಗೇರೆ ಗ್ರಾಮದಲ್ಲಿ ಕಂಡುಬರುವ ಮತ್ತೊಂದು ದೇವಾಲಯವೆಂದರೆ ಆಂಜನೇಯ ದೇವಾಲಯ ೫ ಅಡಿ ಎತ್ತರದ ಜಗತಿಯ ಮೇಲೆ ಇರುವ ದೇವಾಲಯದ ಗರ್ಭಗೃಹ ಮತ್ತು ಸಭಾ ಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಆಂಜನೇಯನ ಉಬ್ಬುಶಿಲ್ಪವಿದೆ. ಇದನ್ನು ಸ್ಥಳೀಯರು ಬಾಲಾಂಜನೇಯನೆಂದು ಕರೆಯುತ್ತಾರೆ. ಸಭಾಮಂಟಪದಲ್ಲಿ ೧೨ ಮರದ ಕಂಬಗಳಿವೆ. ಇತ್ತೀಚೆಗೆ ಎರಡು ಮರದ ಹೊಸ ಕಂಬಗಳನ್ನು ನಿರ್ಮಿಸಿದ್ದಾರೆ. ಈ ದೇವಾಲಯವನ್ನು ಆಧುನಿಕ ಪರಿಕರಗಳಿಂದ ನಿರ್ಮಿಸಿದ್ದು ಜೀರ್ಣೋದ್ದಾರಗೊಳಿಸಲಾಗಿದೆ. ಈ ದೇವಾಲಯದ ವಿಸ್ತೀರ್ಣ ೫೦ ಅಡಿ ಉದ್ದ, ೩೦ ಅಡಿ ಅಗಲವಿದೆ. ಆಂಜನೇಯನ ಎದುರುಗಡೆ ಅಂದರೆ ಪಶ್ಚಿಮಾಭಿಮುಖವಾಗಿರುವ ದೇವಾಲಯಕ್ಕೆ ಎದುರು ಗರುಡಗಂಭ ಅಥವಾ ಈ ಸ್ತಂಭವಿದೆ. ಈ ಸ್ತಂಭ ಸುಮಾರು ೧೫ ಅಡಿ ಎತ್ತರವಾಗಿದೆ. ಈ ಸ್ತಂಭದ ಮೇಲೆ ಶಂಕು, ಚಕ್ರ, ಆಮೆ, ಮೀನು ಚಿತ್ರಗಳನ್ನು ಕಾಣಬಹುದು. ಯುಗಾದಿಯಲ್ಲಿ ಜಾತ್ರೆನಡೆಯುತ್ತದೆ.

### ಗವಿಸಿದ್ದೇಶ್ವರ ದೇವಾಲಯ (ಗವಿಮಠ)

ಈ ದೇವಾಲಯವು ಕ್ರಿ.ಶ.ಸು೧೮ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಈ ದೇವಾಲಯವು ಉದ್ದಿ ಬಸವೇಶ್ವರನಿಂದ ನೈರುತ್ಯಕ್ಕಿದೆ. ಈ ದೇವಾಲಯವು ಗರ್ಭಗೃಹ ಮತ್ತು ತೆರದ ಸಭಾಮಂಟಪಗಳಿಂದ ಕೂಡಿದೆ. ಇದು ಕೊಪ್ಪಳದ ಗವಿಸಿದ್ದೇಶ್ವರ ಮಠದ ಉಪಶಾಖೆಯಾಗಿದೆ. ಆದ್ದರಿಂದ ಇದನ್ನು ಗವಿಮಠ ಎಂದು ಕರೆಯುತ್ತಾರೆ. ಗರ್ಭಗುಡಿಯಲ್ಲಿ ೫ ಅಡಿ ಜಗತಿ ಮೇಲೆ ಪಾದರಕ್ಷೆಗಳು ಮತ್ತು ಶಿವಶಾಂತವೀರ ಮಹಾಸ್ವಾಮಿಗಳ ಭಾವಚಿತ್ರವಿದೆ. ಸಭಾಮಂಟಪವನ್ನು ಎರಡು ಕಂಬಗಳು ಹೊತ್ತುನಿಂತಿವೆ. ಈ ದೇವಾಲಯವು ಉತ್ತರಾಭಿಮುಖವಾಗಿದ್ದು ವಿನಾಶದಂಚಿನಲ್ಲಿದೆ. ಜೀರ್ಣೋದ್ಧಾರಮಾಡಬೇಕಾಗಿದೆ.

### ಮೂರ್ತಿ ಶಿಲ್ಪ

ಶಿಲ್ಪವು ತಪಸ್ಸಿನಿಂದ ಮಾತ್ರವೇ ಸಾಧ್ಯವಾಗುವಂತಹುದು. ಈ ತಪಸ್ಸಿಗೆ ಮೊದಲು ಸಂಕಲ್ಪ, ಸಂಕಲ್ಪದಿಂದ ಪ್ರೇರಿತವಾದ ಆಲೋಚನೆ, ಧ್ಯಾನ, ಭಾವನೆ ಇತ್ಯಾಧಿಗಳನ್ನೆಲ್ಲಾ

ಒಳಗೊಂಡ ತಪಸ್ಸಿನ ಫಲವೇ ಶಿಲ್ಪ. ಶಿಲ್ಪ ಎಂಬ ಪದವು 'ಶೀಲ ಸಾಮಾಧೌ' ಎಂಬ ಧಾತುವಿನಿಂದ ವ್ಯುತ್ಪನ್ನವಾಗಿದೆ. ಸಮಧಿ ಎಂಬ ಅರ್ಥವುಳ್ಳ 'ಶಿಲ್' ಧಾತುವು ತಪಸ್ಸನ್ನೇ ಸೂಚಿಸುತ್ತದೆ. ಶಿಲ್ಪವು ಬಹು ವ್ಯಾಪಕವಾದುದು. ಇದರಲ್ಲಿ ಎರಡು ವಿಧಗಳಿವೆ. ಒಂದು ದೇವ ಶಿಲ್ಪ, ಇನ್ನೊಂದು ಮಾನವ ಶಿಲ್ಪ. ವೈಧಿಕ ಋಷಿಗಳು ನಿರ್ವಹಿಸಿರುವ ಶಿಲ್ಪಗಳು ದೇವತೆಗಳಿಗೆ ಪ್ರಿಯವಾದವು. ದೇವಶಿಲ್ಪವೆಂದರೆ ದೇವಸಂಭಂದ ಇರಿಸಿಕೊಂಡಿರುವ ಶಿಲ್ಪಗಳು. ಯಜ್ಞವೇದಿ, ಯಜ್ಞಕುಂಡ, ಯಜ್ಞಪಾತ್ರೆ, ಯಜ್ಞಜಾತಿ, ದೇವಾಲಯ, ದೇವಮೂರ್ತಿ, ದೇವೋಪಕರಣ, ಪೂಜಾ ಪಾತ್ರೆ, ಸುವರ್ಣಾಲಂಕಾರ, ರಥ, ಆಯುಧಗಳು, ಯಜ್ಞಕುಂಡ, ಯಜ್ಞಪಾತ್ರೆ, ಯಜ್ಞಜಾತಿ, ದೇವಾಲಯ, ದೇವಮೂರ್ತಿ, ದೇವೋಪಕರಣ ಪೂಜಾ ಪಾತ್ರೆ, ಸುವರ್ಣಾಲಂಕಾರ, ರಥ, ಆಯುಧಗಳು, ಯಜ್ಞ ಮತ್ತು ಸುವರ್ಣ, ತಾಮ್ರ, ಕಬ್ಬಿಣ, ಮರ, ಕಲ್ಲು ಎಂಬ ಪಂಚವಿಧ ವಸ್ತುಗಳಲ್ಲಿ ದೇವಾಲಯಕ್ಕೆ ಯಜ್ಞ ಮತ್ತು ಪೂಜೆಗೆ ಸಂಬಂಧಿಸಿದಂತೆ ನಿರ್ಮಿಸುವ ಶಿಲ್ಪಗಳು ದೇವಶಿಲ್ಪಗಳೆಂದು ಕರೆಯುತ್ತಾರೆ[೮]. ಪ್ರಪಂಚದಲ್ಲಿ ಮಾನವನ ಉಪಯೋಗಾರ್ಥವಾಗಿ, ಅವನ ಬದುಕನ್ನು ಸುಖಿಗೊಳಿಸಲು ಮತ್ತು ಅವನ ಆತ್ಮದ ಸಂಸ್ಕರಣೆಗೆ ಅವಶ್ಯಕವಾಗಿ ಪಂಚವಿಧ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗುತ್ತದೆ. ಇದು ಇಹದಲ್ಲಿ ಮನುಷ್ಯನ ಜೀವನ ಸುಖಮಯವಾಗುವಂತೆ ನೆರವಾಗುತ್ತದೆ. ಇಂತಹ ಮನುಷ್ಯಪ್ರಯೊಗಿವಸ್ತು ನಿರ್ಮಾಣವು 'ಮಾನವಶಿಲ್ಪ'ಎಂದು ಕರೆಯಲ್ಪಡುತ್ತದೆ.

ವೇದಗಳ ಕಾಲದಲ್ಲಿ ನಮ್ಮ ದೇಶಕ್ಕೆ ಬಂದು ನೆಲೆಸಿದ ಆರ್ಯರು ಆರಾಧಿಸುತ್ತಿದ್ದ ಇಂದ್ರ, ವರುಣ, ಅಗ್ನಿ ಮೊದಲಾದ ದೇವತೆಗಳು, ಆನಂತರ ಪ್ರಚಾರಕ್ಕೆ ಬಂದ ಬೌದ್ಧ ಧರ್ಮದಿಂದಾಗಿ ಜನರ ಮನಸ್ಸಿನ ಮೇಲೆ ಪ್ರಭಾವ ಬೀರಿದ ಬುದ್ಧ, ಬೋಧಿಸತ್ವಬುದ್ದನ ಜನ್ಮಾಂತರದ ಕಥೆಗಳು ಇಲ್ಲಿನ ಶಿಲ್ಪಗಳಿಗೆ ವಸ್ತುಗಳಾದವು. ಆರ್ಯರು ಮೂರ್ತಿ ಪೂಜೆ ಮಾಡಿದವರಲ್ಲ. ಅವರ ವೇದಗಳಲ್ಲಿ ಕಂಡುಬರುವ ಹಲವು ದೇವತೆಗಳು ಅಗ್ನಿ, ವಾಯು, ರುದ್ರ, ವರುಣ, ಮೊದಲಾದವರು ಮುಂದಿನ ಕಾಲದ ಹಲವು ಪುರಾಣಗಳಲ್ಲಿ ಸೇರಿಕೊಂಡರು. ಮಹಾಭಾರತ, ರಾಮಾಯಣ, ಭಾಗವತಾದಿ ಗ್ರಂಥಗಳಲ್ಲೂ ಅನೇಕ ದೇವರ ಕಥೆಗಳು ಬರುತ್ತದೆ[೯]. ಅವುಗಳಲ್ಲಿ ಹಲವಾರು ದೇವತೆಗಳ ಮತ್ತು ದೇವರುಗಳ ಕಥೆಗಳು ಬಂದವು. ಇದೇಕಾಲಕ್ಕೆ ಜೈನಧರ್ಮಹುಟ್ಟಿಕೊಂಡು ಇಲ್ಲಿನ ಜನಗಳ ಮೇಲೆ ಅವರ ತೀರ್ಥಂಕರರು, ಯಕ್ಷ-ಯಕ್ಷಿಣಿಯರು ಪ್ರಭಾವ ಬೀರಿದ್ದು ಶಿಲ್ಪಗಳ ರಚನೆಗೆ ವಸ್ತು ವಿಷಯವಾದವು.

ಜನರು ನಂಬಿ ಬಂದ ಮತಗಳ ಪ್ರಭಾವದಿಂದ ಹಲವಾರು ದೇವಾಲಯಗಳು ಚೈತ್ಯಾಲಯಗಳು, ಸ್ತೂಪಗಳು, ಬಸದಿಗಳು ಹುಟ್ಟಿಕೊಂಡವು. ಈ ಅವಧಿಯಲ್ಲಿ ಹುಟ್ಟಿಕೊಂಡ ಬಸದಿ, ಚೈತ್ಯದೇಗುಲಗಳಲ್ಲಿ ಹಲವಾರು ದೇವರ ಅಥವಾ ಮಹಾತ್ಮರ ಪ್ರತಿಮೆಗಳನ್ನು

ನೆಟ್ಟರು, ಅದೇ ದೇಗುಲಗಳ ಗೋಡೆಗಳ ಮೇಲೆ, ಕಂಬಗಳ ಮೇಲೆ ಅನೇಕ ದೇವತೆಗಳ ಕಥೆಗಳಿಗೆ ಸಂಬಂಧಪಟ್ಟ ಕೆತ್ತನೆ ಮಾಡಿದರು. ಪೂಜಿಸುವುದಕ್ಕಾಗಿಯೂ ವಿಗ್ರಹಗಳು ನಿರ್ಮಾಣಗೊಂಡವು ಕಥೆ ಹೇಳುವುದಕ್ಕಾಗಿಯೂ ಶಿಲ್ಪಗಳು ನಿರ್ಮಾಣಗೊಂಡವು. ಗೋಡೆಗಳ ಮೇಲೆ, ಸ್ತಂಬಗಳ ಮೇಲೆ ಅರ್ಧಕೊರೆದು ತೋರಿಸಿದ ಅಸಂಖ್ಯ ಉಬ್ಬು ಕೆತ್ತನೆಗಳು ಕಾಣಿಸಿದವು. ಇಂತಹ ಮಂದಿರಗಳ ಅಂದ ಹೆಚ್ಚಿಸುವುದಕ್ಕಾಗಿಯೂ ಶಿಲ್ಪಗಳನ್ನು ಬಳಸಿದರು. ಹೀಗೆ ಹಲವಾರು ಕಾರಣಗಳಿಂದ ನಮ್ಮ ದೇಶದ ಶಿಲ್ಪ ಬೆಳೆಯಿತು.[೧೦]

ನಮ್ಮ ದೇಶದ ದೇವತಾ ಮೂರ್ತಿಗಳಲ್ಲಿ ಎದ್ದು ಕಾಣುವ ಬಹುಮುಖ್ಯವಾದ ವಿವರಗಳೆಂದರೆ ಅವುಗಳ ಅಪ್ರಾಕೃತ ಮತ್ತು ಅಸ್ವಾಭಾವಿಕ, ಮೂರ್ತಿಶಿಲ್ಪದ ಬೆಳವಣಿಗೆಯನ್ನು ಕುರಿತು ಆಲೋಚಿಸಿದಾಗ ಮೊದಲು ನಾವು ಹರಪ್ಪ ಮತ್ತು ಮೆಹೆಂಜೋದಾರಗಳಲ್ಲಿ ದೊರೆತ ಮೂರ್ತಿ ಆಕಾರ ಮೂರು ತಲೆಯ ಪಶುಪತಿ, ಪಶು ಮತ್ತು ಮನುಷ್ಯರ ದೇಹಗಳ ಸಂಯೋಗ ಮರ, ಮನುಷ್ಯರ ಮೂರ್ತಿಗಳನ್ನು ಕಾಣಬಹುದಾಗಿದೆ[೧೧].

ವೈಧಿಕ ಸಾಹಿತ್ಯದಲ್ಲಿ ಅಗ್ನಿಗೆ ಎರಡು ತಲೆ, ನಾಲ್ಕು ಕೊಂಬು, ಮೂರು ಕಾಲು, ಏಳು ಕೈಗಳಿವೆ. ಎಂದು ತಿಳಿದಾಗ ಮನುಷ್ಯನಿಗೆ ಸ್ವಾಭಾವಿಕವಾಗಿ ಇಂತಹ ಮೂರ್ತಿ ಶಿಲ್ಪಗಳ ಬಗ್ಗೆ ಅನುಮಾನಗಳು ಬಂದೇಬರುತ್ತವೆ. ಆದರೆ ನಮ್ಮಲ್ಲಿ ಸಾವಿರಾರು, ನೂರಾರು, ದೇವತೆಗಳು ಕಂಡುಬಂದರೂ ಪೂಜೆಗಾಗಿ ಕೆಲವೇ ಕೆಲವು ದೇವತೆಗಳನ್ನು ಮಾತ್ರ ಆಯ್ದುಕೊಳ್ಳುತ್ತೇವೆ. ವೈದಿಕ ಪರಂಪರೆಯಲ್ಲಿ ಬಂದಾಗ ಒಂದು ದೇವತೆಯಲ್ಲಿ ಹಲವಾರು ದೇವತೆಗಳಿರುವ ನಿದರ್ಶನವನ್ನು ಮಾಡಿಕೊಟ್ಟರು. ಅವುಗಳಲ್ಲಿ ಹಲವಾರು ವಿನಾಯಕರು ಸೇರಿ ಒಬ್ಬ ವಿನಾಯಕ ಗಣಪತಿಯಾದರೆ. ಹತ್ತಾರು ರುದ್ರ ಯಕ್ಷರು ಸೇರಿ ಒಬ್ಬ ಶಿವನಾದ, ಸಾವಿರಾರು ತಾಯಿ ಚೈತನ್ಯಗಳು ಕೂಡಿಕೊಂಡು ಒಬ್ಬಳು ಮಾತೃ ಶಕ್ತಿಯಾದಳು[೧೨] ಇಲ್ಲಿ 'ದೇವನೊಬ್ಬ ನಾಮಹಲವು' ಎನ್ನುವ ಹೇಳಿಕೆಯು ಸೂಕ್ತವಾಗಿದ್ದು, ಭಾರತ ಹಲವಾರು ಧರ್ಮ, ಜಾತಿಗಳಿಂದ ಕೂಡಿದ ಒಂದು ಅಖಂಡ ಭಾರತ. ವೈಧಿಕ ಪರಂಪರೆಯಲ್ಲಿ ದೇವತೆಗಳು ಇರುವುದು ಕಂಡುಬರುತ್ತದೆ.

ಶಿಲ್ಪ ಶಾಸ್ತ್ರದಲ್ಲಿ ಪ್ರತಿಮೆಗಿಂತಲೂ ಪ್ರಮುಖವಾಗಿ ಧ್ಯಾನ ಶ್ಲೋಕವಿದೆ. ಇಲ್ಲಿ ಯಾವುದಾದರೊಂದು ದೇವತೆಯನ್ನು ಕುರಿತು, ಈ ಶ್ಲೋಕದಲ್ಲಿ ದೇವತೆಯರೂಪ ನಿರ್ದೇಶನ, ಭಂಗಿಯ, ಆಯುಧಗಳ ವಿವರವಿರುತ್ತದೆ[೧೩]. ಇವುಗಳು ಮೂರ್ತಿಶಿಲ್ಪದ ಲಕ್ಷಣಗಳನ್ನು ಗುರುತಿಸುವಾಗ ಬಹುಮುಖ್ಯವಾಗಿದೆ. ಈ ಶಾಸ್ತ್ರದಲ್ಲಿ ಶಿಲ್ಪಿಯು ಮೂರ್ತಿಶಿಲ್ಪವನ್ನು ಮಾಡುವ ಮೊದಲು ದೇವಶಿಲ್ಪ ಮತ್ತು ಭಾವಶಿಲ್ಪಗಳೆಂಬ ಎರಡು ಭಾವವಿರಬೇಕೆಂದು ಹೇಳುತ್ತದೆ.[೧೪] ಮೂರ್ತಿಶಿಲ್ಪದಲ್ಲಿ ಬಹು ಮುಖ್ಯವಾಗಿ ಭಂಗಿ, ಆಯುಧ, ಮುದ್ರೆಯ ವಿವರಗಳುಬೇಕು. ಇದರಲ್ಲಿ ಮುದ್ರೆ ಮುಖ್ಯ, ಈ ಶಿಲ್ಪದಲ್ಲಿ ಸ್ಥಾನಿಕ (ನಿಂತಿರುವುದು) ಆಸೀನ(ಕುಳಿತಿರುವುದು), ಮತ್ತು ಶಯನ (ಮಲಗಿರುವುದು)

ರೂಪಗಳು ಬರುತ್ತವೆ.[೨೫] ಇವುಗಳು ಮೂರ್ತಿ ಶಿಲ್ಪದ ಲಕ್ಷಣಗಳನ್ನು ಗುರುತಿಸಲು ಬಹಳ ಮಹತ್ವವಾದವು.

**ಶೈವ ಮೂರ್ತಿ ಶಿಲ್ಪ**

ಶೈವ ಧರ್ಮದಲ್ಲಿ ಲಯಕರ್ತನಾದ ಶಿವನು ಸರ್ವವ್ಯಾಪಿಯಾಗಿರುವನು. ಇವನನ್ನು ಕಾಶಿ, ಗೋಕರ್ಣ, ಶ್ರೀಶೈಲ, ಮೊದಲಾದ ಸ್ಥಳಗಳಲ್ಲಿ ವಿಶೇಷವಾಗಿ ಪೂಜಿಸುತ್ತಾರೆ. ಶಿವನಿಗೆ ವೀರಭದ್ರೇಶ್ವರ, ಮಲ್ಲಿಕಾರ್ಜುನ, ಭೈರವೇಶ್ವರವೆಂದು ಹೆಸರಿದ್ದರೂ, ಬಹುತೇಕ ಇವನನ್ನು ನಾವು ಲಿಂಗ ರೂಪದಲ್ಲಿ ಪೂಜಿಸುತ್ತೇವೆ. ಈ ರೂಪವನ್ನು ಹರಪ್ಪ ಮಹೆಂಜೋದಾರೋದ ಪ್ರಾಚೀನ ಸಿಂಧೂ ನಾಗರೀಕತೆಯಲ್ಲಿ ಕಾಣಬಹುದು. ಯಾತ್ರ ಸ್ಥಳಗಳಲ್ಲಿ ಉದ್ಭವವಾಗಿರುವ ಮೂರ್ತಿಗಳು ಲಿಂಗರೂಪದಲ್ಲಿವೆ. ಶಿವನು ಪ್ರತಿಮೆಯ ರೂಪದಲ್ಲಿದ್ದಾಗ ಇವನ ಲಕ್ಷಣಗಳನ್ನು ಹರಡಿದ ತಲೆಕೂದಲು, ಕೈಗಳಲ್ಲಿ ಕತ್ತಿ, ಶೂಲ, ಕಪಾಲ, ಡಮರು, ದೃಶ್ಯಗಳಿದ್ದರೆ ಇವು ಭೈರವ ಮೂರ್ತಿಯ ಲಕ್ಷಣಗಳು. ಕಪಾಲ ಹಿಡಿದು ಭಿಕ್ಷಾಟನೆಗೆ ಮಾಡುವ ದೃಶ್ಯವಿದ್ದರೆ, ಕಪಾಲ ಭೈರವ ಎಂದು ಕರೆಯುತ್ತಾರೆ.

ಮೋರಿಗೆರೆ ಗ್ರಾಮಕ್ಕೆ ಸೇರಿದ ಮೂರ್ತಿ ಶಿಲ್ಪಗಳು ಬಹುತೇಕ ಶೈವ ಧರ್ಮಕ್ಕೆ ಸಂಬಂಧಿಸಿದವುಗಳಾಗಿದ್ದು. ಇಲ್ಲಿ ಶಿವನು 'ಲಿಂಗ' ರೂಪಗಳಲ್ಲಿರುವುದನ್ನು ಕಾಣಬಹುದು.

**ಶಿವಲಿಂಗಗಳು**

ಮೋರಿಗೆರೆ ಗ್ರಾಮದ ಊರ ಹೊರಗೆ ಹೊಲದಲ್ಲಿರುವ 'ಮಳೆಮಲ್ಲೇಶ್ವರ' ದೇವಾಲಯವಿದೆ. ಇದುಕೂಡಾ ಪುರಾತನವಾದ ದೇವಾಲಯ. ಇಲ್ಲಿರುವ ಈಶ್ವರ ಲಿಂಗವು ಸುಮಾರು ೪ ಅಡಿ ಎತ್ತರವಾಗಿದ್ದು, ಚೌಕಾಕಾರದ ಪೀಠದ ಮೇಲೆ ಪ್ರತಿಷ್ಠಾಪಿತವಾಗಿದೆ. ಈ ಲಿಂಗವು ಕಪ್ಪು ಶಿಲೆಯಲ್ಲಿದ್ದು ಕಲ್ಯಾಣಿ ಚಾಲುಕ್ಯರ ಕಾಲದ್ದಾಗಿರಬಹುದು (ಪಂಚಲಿಂಗದಲ್ಲಿ ೧)

ಇದೇ ಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿರುವ ಈಶ್ವರಲಿಂಗ ಸುಮಾರು ೫ ಅಡಿ ಎತ್ತರವಿದೆ. ಇದುಕೂಡ ಚೌಕಾಕಾರದ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಈ ಲಿಂಗವು ಕಪ್ಪುಮಿಶ್ರಿತ ನೀಲಿ ಛಾಯೆಯ ಬಳಪದ ಕಲ್ಲಿನಲ್ಲಿ ನಿರ್ಮಿಸಲಾಗಿದೆ (ಪಂಚಲಿಂಗದಲ್ಲಿ ೨).

ಇದೇ ಗ್ರಾಮದಲ್ಲಿ ಕಲ್ಲುಗುಡಿ ಕಲ್ಲೇಶ್ವರ ದೇವಾಲಯವಿದೆ. ಈ ದೇವಾಲಯದ ಗರ್ಭಗುಡಿಯಲ್ಲಿ ಸುಮಾರು ೪ ಅಡಿ ಎತ್ತರದ ಈಶ್ವರ ಲಿಂಗವಿದೆ. ಈ ಲಿಂಗವು ಕಪ್ಪು ಶಿಲೆಯಲ್ಲಿದ್ದು ಕಲ್ಯಾಣ ಚಾಲುಕ್ಯರ ಕಾಲದ್ದಾಗಿರಬಹುದು. (ಪಂಚಲಿಂಗದಲ್ಲಿ೩)

ಕೊನೆಯದಾಗಿ ಮೋರಿಗೆರೆ ಗ್ರಾಮದ ಊರ ಹೊರಗೆ ಇರುವ ಉದ್ದಿ ಬಸವೇಶ್ವರ ದೇವಸ್ಥಾನಕ್ಕೆ ಅಂಟಿಕೊಂಡು ಎರಡು ದೇವಾಲಯಗಳಿವೆ. ಈ ಎರಡು ದೇವಾಲಯಗಳಲ್ಲಿ

ಪೂರ್ವಾಭಿಮುಖವಾಗಿ ಈಶ್ವರ ಲಿಂಗಗಳು ಇವೆ. ಸುಮಾರು ೫ ಅಡಿ ಎತ್ತರದ ಜಗತಿಯ ಮೇಲೆ ಪ್ರತಿಷ್ಠಾಪಿಸಲಾಗಿದೆ. ಈ ಮೂರ್ತಿಗಳನ್ನು ಬಳಪದ ಕಲ್ಲಿನಿಂದ ಕೆತ್ತಿದ್ದು, ಸುಮಾರು ೧೨ನೇ ಶತಮಾನದ ಕಲ್ಯಾಣಿ ಚಾಲುಕ್ಯರ ಕಾಲದ್ದಾಗಿದೆ. (ಪಂಚಲಿಂಗಗಳಲ್ಲಿ ೪ ಮತ್ತು ೫) ಮೋರಿಗೆರೆ ಗ್ರಾಮವನ್ನು ಪಂಚಲಿಂಗಗಳ ಗ್ರಾಮ ಎಂದು ಕರೆಯುತ್ತಾರೆ.

**ನಂದಿಮೂರ್ತಿ**

ನಂದಿಯನ್ನು ಬಹುತೇಕವಾಗಿ ಕಾಣುವುದು ಶಿವಲಿಂಗದ ಮುಂದೆ, ನಂದಿ ಶಿವನ ವಾಹನ ಎನ್ನುವುದು ಪುರಾಣ ಪ್ರಸಿದ್ಧವಾಗಿದೆ. ವೃಷಧ್ವಜ, ವೃಷಕೇತನ, ಎಂದು ಶಿವನ ಹೆಸರುಗಳಾಗಿದ್ದರೂ ನಂದಿಯ ಬೆನ್ನಿನ ಮೇಲಿರುವ ಭುಜವು ಲಿಂಗಾಕಾರವಾಗಿರುವುದರಿಂದ ವಿಶೇಷವಾದ ಪೂಜೆ ಸಲ್ಲಿಸುತ್ತಿರುವುದನ್ನು ಕಾಣಬಹುದು[೯]. ಶಿವನು ವೃಷವಾಹನ ಅಥವಾ 'ವೃಷಕೇತನ' ಮಾತ್ರವಲ್ಲ, 'ವೃಷವೂ' ಹೌದು ನಂದಿಯನ್ನೇ ಶಿವನೆಂದು ಪೂಜೆಮಾಡುವ ವಾಡಿಕೆ ಇರುವುದನ್ನು ಕಾಣಬಹುದು.

ನಂದಿ ಶಿಲ್ಪವು ಮೋರಿಗೆರೆ ಗ್ರಾಮದ ಹೊರಗೆ ಹೊಲದಲ್ಲಿರುವ 'ಮಳೆಮಲ್ಲೇಶ್ವರ' ದೇವಾಲಯದಲ್ಲಿ ಈಶ್ವರಲಿಂಗದ ಎದುರಿಗೆ ನಂದಿ ಶಿಲ್ಪವು ಕುಳಿತಿದ್ದು, ಭುಜದ ಹಿಂಬಾಗದಿಂದ ಪಾದದವರೆಗೂ ಹಾಕಿಕೊಂಡಿರುವ ಗೆಜ್ಜೆಯ ಸರಕ್ಕೆ ಗಂಟೆಕಟ್ಟಿದ್ದನ್ನು ಕಾಣಬಹುದು. ಕೊರಳಲ್ಲಿ ಚಿಕ್ಕದಾದ ಕೆತ್ತಿದ ಸರವನ್ನು ಸಹ ಕಾಣಬಹುದು. ಈ ಶಿಲ್ಪವು ಸುಮಾರು ೧೧-೧೨ನೆಯ ಶತಮಾನದಾಗಿದ್ದು, ಕಪ್ಪು ಶಿಲೆಯಲ್ಲಿದೆ.

ಇದೇ ಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿ ಶಿವಲಿಂಗದ ಎದುರಿಗೆ ನಂದಿ ಶಿಲ್ಪವು ಕುಳಿತ ಭಂಗಿಯಲ್ಲಿದ್ದು, ಭುಜದ ಹಿಂಭಾಗದಿಂದ ಪಾದದವರೆಗೆ ಹಾಕಿಕೊಂಡಿರುವ ಗೆಜ್ಜೆಯ ಸರಕ್ಕೆ ಗಂಟೆ ಕಟ್ಟಿದ್ದನ್ನು ಕಾಣಬಹುದು. ಇದು ಸುಮಾರು ೧ ೧/೨ ಅಡಿ ಎತ್ತರವಾಗಿದೆ. ಹಾಗೂ ಬಳಪದ ಶಿಲೆಯಲ್ಲಿದ್ದು, ಕಲ್ಯಾಣ ಚಾಲುಕ್ಯರ ಕಾಲದ್ದಾಗಿರಬಹುದು.

ಇದೇ ಗ್ರಾಮದಲ್ಲಿ ಕಲ್ಗುಡಿ ಕಲ್ಲೇಶ್ವರ ದೇವಾಲಯವಿದೆ. ಈ ದೇವಾಲಯದಲ್ಲಿ ಶಿವನಲಿಂಗವಿದೆ. ಎದುರಿಗೆ ನಂದಿ ಶಿಲ್ಪ ಇದೆ. ಈ ಶಿಲ್ಪವು ಕುಳಿತ ಭಂಗಿಯಲ್ಲಿದ್ದು ಹಣೆಗೆ ಪಟ್ಟಿಯನ್ನು, ಕೊರಳಿಗೆ ದಂಡೆಯನ್ನು ಭುಜದ ಹಿಂಭಾಗದಿಂದ ಪಾದದವರೆಗೆ ದುಂಡನೆಯಾಕಾರದ ಗೆಜ್ಜೆ ಸರ ಹೊಂದಿರುವುದನ್ನು ಕಾಣಬಹುದು. ಸುಮಾರು ೨ಅಡಿ ಎತ್ತರವಾಗಿದೆ. ಈ ಶಿಲ್ಪವು ಕಪ್ಪುಶಿಲೆಯನ್ನು ಹೊಂದಿದ್ದು ಕಲ್ಯಾಣ ಚಾಲುಕ್ಯರ ಕಾಲದ್ದಾಗಿರಬಹುದು.

ಇದೇ ಗ್ರಾಮದ ಊರ ಹೊರಗೆ ಇರುವ ಉದ್ದಿಬಸವೇಶ್ವರ ದೇವಸ್ಥಾನದ ಎರಡು ದೇವಾಲಯಗಳಲ್ಲಿ ಶಿವನ ಲಿಂಗದ ಎದುರು ಸುಮಾರು ೧ ೧/೨ ಅಥವಾ ೨ ಅಡಿ ಎತ್ತರವಿರುವ ನಂದಿ ಶಿಲ್ಪವಿದೆ. ಈ ನಂದಿ ಶಿಲ್ಪವು ಕುಳಿತ ಭಂಗಿಯಲ್ಲಿದ್ದು,

ಭುಜದ ಹಿಂಬಾಗದಿಂದ ಪಾದದವರೆಗೆ ಹಾಕಿಕೊಂಡಿರುವ ಗೆಜ್ಜೆಯ ಸರಕ್ಕೆ ಗಂಟೆಕಟ್ಟಿದನ್ನು ಕಾಣಬಹುದು. ಈ ಶಿಲ್ಪವು ಕಪ್ಪುಶಿಲೆಯಲ್ಲಿದೆ. ಕ್ರಿ.ಶ.೧೨ನೆಯ ಶತಮಾನದ ಕಲ್ಯಾಣ ಚಾಲುಕ್ಯರ ಕಾಲದ್ದಾಗಿರಬಹುದು. ಇತ್ತೀಚೆಗಷ್ಟೆ ಈ ದೇವಾಲಯದಲ್ಲಿ ಶಿವನ ಲಿಂಗದ ಎದುರಿಗೆ ಅಂದರೆ ಸುಮಾರು ೨೦ ಮೀ ದೂರದಲ್ಲಿ ೫ ಅಡಿ ಎತ್ತರದ ನಂದಿ ಶಿಲ್ಪವನ್ನು ಬಳಪದ ಶಿಲೆಯಿಂದ ನಿರ್ಮಾಣ ಮಾಡಿದ್ದಾರೆ.

**ವೈಷ್ಣವ ಮೂರ್ತಿ ಶಿಲ್ಪ**

ಮೂರ್ತಿ ಶಿಲ್ಪಗಳ ಲಕ್ಷಣಗಳನ್ನು ಹೇಳುವಾಗ ಮುಖ್ಯವಾಗಿ ಮುದ್ರೆ, ಭಂಗಿ, ಆಯುಧಗಳು ಮಹತ್ವದ ಪಾತ್ರ ವಹಿಸಿವೆ. ಆದರೆ ಇಲ್ಲಿ ವಿಷ್ಣುವಿನ ಮೂರ್ತಿಲಕ್ಷಣಗಳನ್ನು ತಿಳಿಯಲು ಶಂಕ, ಚಕ್ರ, ಗದೆ, ಬಹಳ ಮಹತ್ವದವು. ವೈಷ್ಣವ ಪಂಥದಲ್ಲಿ ಮುಖ್ಯದೇವತೆ ವಿಷ್ಣು, ವಿಷ್ಣುವಿನ ಉಲ್ಲೇಖ ನಾಲ್ಕು ವೇದಗಳಲ್ಲಿ ಬರುತ್ತದೆ. ಋಗ್ವೇದದಲ್ಲಿ ಆರ್ಯ ವೀರನಾದ ಇಂದ್ರನಿಗೆ ವಿಷ್ಣು ನೆರವಾದ ಪ್ರಸ್ತಾಪಗಳು ಕಂಡುಬರುತ್ತದೆ.ಬೃಹದ್ದೇವತಾ ಇಂದ್ರನನ್ನು ವಿಷ್ಣುವಿನ ಒಟ್ಟಿಗೆ 'ಇಂದ್ರ ವಿಷ್ಣು' ಎಂದು ಕರೆದಿರುವುದು ಕಂಡು ಬಂದಿದೆ. ಆದರೆ ವೈದಿಕ ಸಂದರ್ಭದಲ್ಲಿ ಇಂದ್ರನಂತೆ, ಅಗ್ನಿಯಂತೆ, ಪ್ರಜಾಪತಿಯಂತೆ, ವಿಷ್ಣು ಪ್ರಸಿದ್ಧ ಅಥವಾ ಪ್ರಧಾನ ದೇವತೆಯೆನಲ್ಲ, ಅವನ ಪಾತ್ರವು ರುದ್ರನ ಪಾತ್ರದಂತೆಯೇ ಬ್ರಾಹ್ಮಣರ ಕಾಲದಲ್ಲಿಯೇ ಇಬ್ಬರು ಪ್ರಧಾನರಾದದ್ದು.[೧೭] ಹೀಗೆ ವೇದಗಳಲ್ಲಿ ಶಿವ ವಿಷ್ಣುವಿಗೆ ಭೇದವಿಲ್ಲದೆ ಒಬ್ಬರಿಗೊಬ್ಬರು ಪೂರಕವಾದವರು ಎಂಬುದನ್ನು ನಾವು ತಿಳಿಯಬಹುದು.

ಮೂರ್ತಿ ಶಿಲ್ಪಗಳಲ್ಲಿ ಬಹುಮುಖ್ಯವಾಗಿ ದೇವತೆಗಳ ವಾಹನಗಳ ಆಧಾರದ ಮೇಲೆ ಇದೇ ದೇವತೆಗಳೆಂದು ಗುರುತಿಸಬಹುದು. ಅವುಗಳಲ್ಲಿ ಶಿವನಿಗೆ ಬಸವ, ಬ್ರಹ್ಮನಿಗೆ ಹಂಸ, ವಿಷ್ಣುವಿಗೆ ಗರುಡ, ಗಣಪತಿಗೆ ಇಲಿ, ದೇವಿಗೆ ಸಿಂಹ, ಸುಬ್ರಹ್ಮಣ್ಯನಿಗೆ ನವಿಲು ಎಂದು ತಿಳಿಯಬಹುದು. ವೈಷ್ಣವ ಮೂರ್ತಿ ಶಿಲ್ಪ ಮೋರಿಗೆರೆ ಗ್ರಾಮದಲ್ಲಿ ಕಂಡು ಬರುವುದಿಲ್ಲ.

**ಜೈನ ಮೂರ್ತಿ ಶಿಲ್ಪ**

ಕರ್ನಾಟಕದಲ್ಲಿ ಪ್ರವರ್ಧಮಾನದಲ್ಲಿದ್ದ ಧರ್ಮಗಳಲ್ಲಿ ಜೈನ ಧರ್ಮವೂ ಒಂದು. ಈ ಧರ್ಮವು ಹಂಪಿಯ ಪೂರ್ವ ಭಾಗಕ್ಕಿಂತ ಪಶ್ಚಿಮ ಭಾಗಗಳಲ್ಲಿ ಬಹಳ ಪ್ರಮುಖವಾದ ಸ್ಥಾನವನ್ನು ಪಡೆದಿದೆ. ಇದು ತನ್ನ ಅಹಿಂಸಾ ಮಾರ್ಗದ ಜೊತೆಗೆ ಸಾಂಸ್ಕೃತಿಕವಾಗಿ ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡು ಬಂದಿದೆ. ಜೈನ ಕೇಂದ್ರಗಳಾದ ಶ್ರವಣ ಬೆಳಗೋಳ, ಕೊಪ್ಪಳ, ಬನವಾಸಿ, ಲಕ್ಕುಂಡಿ ಮುಂತಾದ ಸ್ಥಳಗಳಲ್ಲಿ ವಾಸ್ತು ಶಿಲ್ಪ ಮತ್ತು ಮೂರ್ತಿ ಶಿಲ್ಪದ ಪ್ರಮುಖ ಕೇಂದ್ರವಾಗಿ ಉಳಿಸಿಕೊಂಡು ಬಂದಿದೆ. ಈ ದೃಷ್ಟಿಯಿಂದ ಜೈನ ಧರ್ಮಕ್ಕೆ ಸಂಬಂಧಿಸಿದ ಸಾಹಿತ್ಯ ಸೃಷ್ಟಿ, ಕರ್ನಾಟಕದ ಆಚಾರ್ಯರಿಂದ ಪ್ರಾರಂಭವಾಗಿ ಇಂದೂ ಜೈನಧರ್ಮದ ಅಸ್ತಿತ್ವ ಉಳಿದುಕೊಂಡು ಬಂದಿದೆ. ಜೈನ

ಧರ್ಮದಲ್ಲಿ ೨೪ ಜನ ತೀರ್ಥಂಕರರು ಜನಿಸಿ ಅವರ ಬೋಧನೆ ತತ್ವಗಳು ಇಂದೂ ಜೈನ ಧರ್ಮದಲ್ಲಿ ಜೀವಂತವಾಗಿವೆ. ಮೂರ್ತಿ ಶಿಲ್ಪದ ಅಧ್ಯಯನ ಮಾಡುವಾಗ ೨೪ ಜನ ತೀರ್ಥಂಕರ ಲಾಂಛನ ಹಾಗೂ ಅವರ ಯಕ್ಷ ಯಕ್ಷಿಯರು ಮುಖ್ಯರಾಗುತ್ತಾರೆ. ಮುಖ್ಯವಾಗಿ ಅವರ ಲಾಂಛನಗಳು ಪ್ರಮುಖ ಪಾತ್ರವಹಿಸುತ್ತವೆ. ಅವುಗಳೆಂದರೆ ವೃಷಭನಾಥನ ಎತ್ತು, ಅಜಿತನಾಥನ ಆನೆ, ಶಂಭವನಾಥನ ಕುದುರೆ, ಅಭಿನಂದನನ ಕಪಿ, ಸುಮತಿನಾಥನ ತೋಕ, ಪದ್ಮಪ್ರಭನ ಕಮಲ, ಸುಪಾರ್ಶ್ವನಾಥನ ಸ್ವಸ್ತಿಕ, ಚಂದ್ರನಾಥನ ಚಂದ್ರ, ಪುಷ್ಪದಂತನ ಮಕರ, ಶೀಥಲನಾಥನ ಕಲ್ಪವೃಕ್ಷ, ಶ್ರೇಯಾಂಸನ ಗಂಡಕ, ವಾಸುಪೂಜ್ಯ ಮಹಿಷ, ವಿಮಲನಾಥನ ವರಹ, ಅನಂತನಾಥನ ಭಲ್ಲೂಕ, ಧರ್ಮನಾಥನ ವಜ್ರ, ಶಾಂತಿನಾಥನ ಹರಿಣಿ, ಕುಂತುನಾಥನ ಮೇಷ, ಅರನಾಥನ ಮತ್ಸ್ಯ, ಮಲ್ಲಿನಾಥನ ಕಲಸ, ಮನಿಸುವ್ರತನ ಕೂರ್ಮ, ನಮಿನಾಥನ ಇಂದೀವರ, ನೇಮಿನಾಥನ ಶಂಖ, ಪಾರ್ಶ್ವನಾಥನ ಸರ್ಪ, ವರ್ಧಮಾನನ ಸಿಂಹ.

ಮೋರಿಗೆರೆ ಗ್ರಾಮದಲ್ಲಿರುವ ಬ್ರಹ್ಮದೇವಾಲಯವು ಜಿನಾಲಯವಾಗಿತ್ತು. ಜೊತೆಗೆ ಮೂಲತಃ ಇದು ಜೈನ ಬಸದಿ ಈ ದೇವಾಲಯದಲ್ಲಿ ಯಕ್ಷೆಯ ವಿಗ್ರಹಗಳು ಮತ್ತು ತೀರ್ಥಂಕರರ ಶಿಲ್ಪ ಇದ್ದವು ಎನ್ನುವುದು ಊರಿನ ಜನರ ಅಭಿಪ್ರಾಯ. ಈ ದೇವಾಲಯದಲ್ಲಿ ಬ್ರಹ್ಮ ಹಾಗೂ ಪದ್ಮಾವತಿಯ ಮೂರ್ತಿಗಳಿವೆ. ಇವುಗಳನ್ನೆಲ್ಲಾ ಗಮನಿಸಿದರೆ ಜೈನ ಧರ್ಮದ ಅಸ್ತಿತ್ವದ ಬಗ್ಗೆ ತಿಳಿದುಕೊಳ್ಳಬಹುದು.

## ಅಡಿ ಟಿಪ್ಪಣಿಗಳು

೧. ಇಂಗ್ಲೀಷ್-ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾಲಯ. ೧೯೯೯

೨. ರಾಮಚಂದ್ರರಾವ್ ಎಸ್.ಕೆ. ಭಾರತದ ದೇವಾಲಯದ ನೆಲೆ, ಹಿನ್ನಲೆ, ೧೯೭೯

೩. ಅಪರ್ಣ ಕೂ.ಸ. ದೇವಾಲಯ ವಾಸ್ತು ಶಿಲ್ಪ ಪರಿಚಯ ೧೯೯೯ ಪು. ೮-೧೦

೪. ದೇವರ ಕೊಂಡಾರೆಡ್ಡಿ ಮತ್ತು ಇತರರು, ಕನ್ನಡ ವಿಶ್ವ ವಿದ್ಯಾಲಯ, ಶಾಸನ ಸಂಪುಟ-೧-೧೯೯೮ ಹಗರಿಬೊಮ್ಮನಹಳ್ಳಿ-೨೪

೫. ಅದೇ- ೧೯೯೮ ಹಗರಿಬೊಮ್ಮನಹಳ್ಳಿ-೨೭

೬. ಅದೇ- ೧೯೯೮ ಹಗರಿಬೊಮ್ಮನಹಳ್ಳಿ-೨೬

೭. ಅದೇ- ೧೯೯೮ ಹಗರಿಬೊಮ್ಮನಹಳ್ಳಿ-೨೫

೮. ಜ್ಞಾನಾನಂದ ಜಿ. ಶಿಲ್ಪದರ್ಶ ಸಂಪುಟ-೧ ೨೦೦೧, ಪು ೩-೪

೯. ಶಿವರಾಮ ಕಾರಂತ ಕೆ. ಕರ್ನಾಟಕದಲ್ಲಿ ಶಿಲ್ಪ -೧೯೮೩ ಪು ೧೫-೧೬

೧೦.ಅದೇ- ೧೯೮೩ ಪು ೧೬

೧೧. ರಾಮಚಂದ್ರರಾವ್ ಎಸ್.ಕೆ. ಮೂರ್ತಿಶಿಲ್ಪ ನೆಲೆ-ಹಿನ್ನಲೆ ೧೯೭೫ ಪು ೫೦

೧೨. ಅದೇ-೧೯೭೫ ಪು ೫೧

೧೩. ಅದೇ-೧೯೭೫ ಪು ೫೫

೧೪. ಅದೇ-೧೯೭೫ ಪು ೫೭

೧೫. ಅದೇ-೧೯೭೫ ಪು ೬೪

೧೬. ಅದೇ-೧೯೭೫ ಪು ೧೧೪

೧೭. ಅದೇ-೧೯೭೫ ಪು ೧೩೫.

## ೩.೪ ಸ್ಮಾರಕ ಶಾಸನಗಳು (ಇತರೆ)

ಧಾರ್ಮಿಕ ಮತ್ತು ಲೌಕಿಕ ಉದ್ದೇಶಗಳಿಗಾಗಿ ಮಡಿದವರ ಸ್ಮಾರಕವಾಗಿ ನಿಲ್ಲಿಸಿದ ಶಿಲೆಗಳಿಗೆ ಸ್ಮಾರಕ ಶಾಸನಗಳೆಂದು ಕರೆಯುತ್ತಾರೆ. ಇವುಗಳನ್ನು ಬರವಣಿಗೆ ಹೊಂದಿದವು ಮತ್ತು ಬರವಣಿಗೆ ಹೊಂದದವುಗಳೆಂದು ವಿಭಾಗಿಸಬಹುದು ಧಾರ್ಮಿಕ ಮತ್ತು ಲೌಖಿಕ ಉದ್ದೇಶಗಳಿಗಾಗಿ ಮರಣ ಹೊಂದಿದ ವ್ಯಕ್ತಿಯ ಘಟನೆಯನ್ನು ಕೆಲವು ಸಲ ಚಿತ್ರಗಳ ಮೂಲಕ, ವ್ಯಕ್ತಪಡಿಸಿರುತ್ತಾರೆ ಇದಕ್ಕೆ ಅಪವಾದವೆಂಬಂತೆ ಚಿತ್ರ ಹಾಗೂ ಬರವಣಿಗೆ ರಹಿತ, ಆದರೆ ಪೂಜೆಗೊಳ್ಳುತ್ತಿರುವ ಸ್ಮಾರಕ ಶಿಲೆಗಳು ದೊರೆಯುತ್ತವೆ. ಇವು ಶಿವಮೊಗ್ಗ ಜಿಲ್ಲೆಯಲ್ಲಿ ದೊರೆಯುತ್ತವೆ. ಇವುಗಳಿಗೆ[೧] ಜಟ್ಟಿಗನ ಕಲ್ಲೆಂದು ಕರೆಯುತ್ತಾರೆ. ಕೆಲವುಕಡೆ ಈ ಶಾಸನಗಳು ದಂತಕತೆಗಳನ್ನು ಹೇಳುತ್ತವೆ. ಇದರಲ್ಲಿ ಆತ್ಮಬಲಿದಾನ ಮತ್ತು ವೀರ ಮರಣವೆಂದೂ ವಿಂಗಡಿಸಬಹುದು. ಆತ್ಮ ಬಲಿದಾನಗೆಯ್ದವರ ಸ್ಮಾರಕವಾಗಿ ನಿಲ್ಲಿಸುವ ಶಿಲೆಗಳಿಗೆ ಆತ್ಮಬಲಿದಾನ, ವೀರ ಮರಣ ಹೊಂದಿದವರ ಸ್ಮಾರಕವಾಗಿ ನಿಲ್ಲಿಸಿದ ಶಿಲೆಗಳಿಗೆ ವೀರಗಲ್ಲುಗಳೆಂದು ಕರೆಯುತ್ತಾರೆ.[೨]

ಲೌಕಿಕ ಮತ್ತು ಅಲೌಕಿಕ ಜೀವನಗಳಿಗೆ ಸಂಬಂಧಿಸಿದಂತೆ ಪ್ರಾಚೀನ ಕರ್ನಾಟಕದಲ್ಲಿ ಹಲವು ಹರಕೆಗಳಿದ್ದವು. ವ್ಯಕ್ತಿ ದೇವರಿಗೆ ಪ್ರಾಣವನ್ನು ಅರ್ಪಿಸುವುದರ ಮೂಲಕ ಹರಕೆ ಈಡೇರಿಸುತ್ತಿದ್ದ. ಅವುಗಳಲ್ಲಿ ಅರಸನಿಗೆ ಗಂಡು ಮಗುವಾಗಲಿ, ರಾಣಿಯು ಕುಮಾರನನ್ನು ಪಡೆಯಲಿ ಎನ್ನುವ ಹರಕೆಗಳು ಸಾಮಾನ್ಯ ಜನರು ದೇವರಿಗೆ ಒಪ್ಪಿಸುವುದರ ಮೂಲಕ ದೇಹತ್ಯಾಗ ಮಾಡಿ ಆತ್ಮವನ್ನು ಬಲಿಕೊಡುತ್ತಿದ್ದರು. ಇದರಲ್ಲಿ ಜೋಳವಾರೆ, ವೇಳೆವಾರೆ, ಲೆಂಕವಾಳಿ ಎನ್ನುವ ಪ್ರಕಾರಗಳು ಸಹ ಕಂಡುಬರುತ್ತವೆ. ಅನ್ನವನ್ನು ಕೊಟ್ಟು ಸಾಕಿದ ಒಡೆಯನಿಗೆ ಕಷ್ಟ ಬಂದಾಗ ಅವನಿಂದ ಉಪಕಾರ ಪಡೆದಿರುವ ವ್ಯಕ್ತಿಯು ಒಡೆಯನಿಗೆ ಸಹಾಯ ಮಾಡಬೇಕು. ಇದಕ್ಕೆ ಜೋಳವಾಳೆ ಎನ್ನುವರು.[೩] ಉದಾ: ವಿಷ್ಣುವರ್ಧನನು ತಲಕಾಡಿನ ಅದಿಯಮನ ಮೇಲೆ ದಾಳಿ ಮಾಡಿದಾಗ ಅವನ ಸಾಹಣಿ ಬಾಸಯನು ನುಗ್ಗಿ ಹೋರಾಡಿ ಜೋಳವಾಳೆಯನ್ನು ಮೆರೆದು ಮಡಿಯುತ್ತಾನೆ. ಶ್ರೀ ನಾರಸಿಂಗದೇವನು ಪಟ್ಟಧರಸಿ, ಬಮ್ಮಲದೇವಿಯು ಸ್ವರ್ಗಸ್ಥೆಯಾದಾಗ ಚಾಕಗಾವುಂಡ ಎಂಬಾತನು 'ಜೋಳವಾಳಿಗಂ' ಮಡಿದು ಸುರಲೋಕ ಪ್ರಾಪ್ತನಾಗುತ್ತಾನೆ.

ತಮಗೆ ಅನ್ನವನ್ನು ನೀಡಿದ ಒಡೆಯನು ಮಡಿದರೆ ತಾವು ಮಡಿಯುವುದಾಗಿ ವೇಳೆವಡಿಚರು ಪ್ರತಿಜ್ಞೆಯನ್ನು ಕೈಗೊಳ್ಳುತ್ತಿದ್ದರು. ಹೀಗೆ ಪ್ರತಿಜ್ಞೆ ಕೈಗೊಳ್ಳುವುದನ್ನು 'ವೇಳೆಗೋಳ್' ಎಂದು ಕರೆದರೆ, ತಮ್ಮ ಒಡೆಯನು ಮಡಿದಾಗ ಅವನ ವೇಳೆವಡಿಚರು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿದ್ದರು. ವೇಳೆಗೊಳ್ಳುವ ಸಂಪ್ರದಾಯದ ಬೇರುಗಳು ಬಹುಹಿಂದಕ್ಕೆ ಹೋಗುತ್ತಾವೆ. ಪ್ರಾಚೀನ ಜನಾಂಗಗಳಲ್ಲಿ ರಾಜನು ಸತ್ತಾಗ ಅವನು ಪರಲೋಕದಲ್ಲಿಯೂ, ಇಲ್ಲಿಯಂತೆ ಸುಖಕರವಾಗಿರಲೆಂದು ಅವನ ಸಮಾಧಿಯಲ್ಲಿ ಅವನಿಗೆ ಇಷ್ಟವಾದ ವಸ್ತು ಪ್ರಾಣಿ ಜನರುಗಳನ್ನು ಹೂಳುತ್ತಿದ್ದರು.[೪] ಉದಾಹರಣೆಗೆ ಸಿಥಿಯನ್ನರ

ರಾಜನೊಬ್ಬನು ಸತ್ತಾಗ ಅವನ ಜೊತೆಗೆ ಮತ್ತು ಅವನ ಸುತ್ತಮುತ್ತ ಅವನ ಅಡಿಗೆಯವರನ್ನೂ ಆಳುಗಳನ್ನು ಕುದುರೆಗಳನ್ನು ಹೂಳುತ್ತಿದ್ದರು. ಈ ಪದ್ಧತಿ ಕರ್ನಾಟಕ, ತಮಿಳುನಾಡು, ಆಂಧ್ರದಲ್ಲಿಯೂ ಪ್ರಚಾರದಲ್ಲಿದ್ದಿತು. ರಾಜರುಗಳಿಗೆ ಅಪಾಯ ಬಂದಾಗ ತಮ್ಮ ಪ್ರಾಣವನ್ನು ಕೊಟ್ಟು ರಕ್ಷಿಸುವ ಹಾಗೂ ಅವರು ನಿಧನರಾದರೆ ತಾವು ಪ್ರಾಣ ಕಳೆದುಕೊಳ್ಳುವ ವ್ಯಕ್ತಿಗಳಿಗೆ ಲೆಂಕರರು ಅಥವಾ ಲೆಂಕವಾಳೆಯರು ಎಂದು ಕರೆಯುತ್ತಿದ್ದರು.[೫] ಇದು ಅವರ ವಂಶದ ಕರ್ತವ್ಯವು ಆಗಿತ್ತು. ಲೆಂಕರೊಡನೆ ಸಹಗಮನ ಮಾಡಲು ಲೆಂಕಿಯಾರು ಸಹ ಸಿದ್ಧವಾಗುತ್ತಿದ್ದರು.[೬] ಉದಾ: ಸು. ೧೨೨೦ ರ ಶಾಸನದಲ್ಲಿ ವೀರ ಬಲ್ಲಾಳನ ಸಾವಿನ ನಂತರ ಕುವರಲಕ್ಷ್ಮಣನೂ, ಅವನ ಹೆಂಡತಿಯು ಪ್ರಾಣತ್ಯಾಗ ಮಾಡುತ್ತಾಳೆ. ಆಗ ಒಂದು ಸಾವಿರ ವೀರರೂ ಪ್ರಾಣವನ್ನು ತ್ಯಜಿಸುತ್ತಾರೆ ಇವರನ್ನು ಶಾಸನವು 'ಲೆಂಕರೆಂದು' ಕರೆದಿದೆ.

## ವೀರಗಲ್ಲು

ಕರ್ನಾಟಕದಲ್ಲಿ ದಾನ ಶಾಸನಗಳನ್ನು ಬಿಟ್ಟರೆ ಅತಿ ಹೆಚ್ಚು ಸಂಖ್ಯೆಯಲ್ಲಿ ದೊರೆಯುವ ಶಾಸನಗಳೆಂದರೆ ವೀರಗಲ್ಲುಗಳು. ಇವು ಯುದ್ಧದಲ್ಲಿ ಸತ್ತ ವೀರರ ನೆನಪಿಗಾಗಿ ನೆಡುವಂತಹ ಸ್ಮಾರಕಗಳಾಗಿವೆ. ಮನುಷ್ಯನು ಹುಟ್ಟಿದ ಮೇಲೆ ಮರಣ ಹೊಂದಲೇಬೇಕು. ಇದರಲ್ಲಿ ಸಹಜಮರಣ ಅಸಹಜ ಮರಣವೆಂದು ಎರಡು ವಿಧ. ವೀರ ಮರಣಗಳು ಅಸಹಜ ಮರಣಗಳಾದರೂ ದುರ್ಮರಣಗಳಲ್ಲ. ಅಸಾಮಾನ್ಯ ಮರಣಗಳು ಉದಾ: ತೊಂದರೆಗೊಳಗಾದ ಸ್ತ್ರೀ ಮೈಗೆ ಬೆಂಕಿ ಹಚ್ಚಿಕೊಳ್ಳುವುದು ದುರ್ಮರಣ. ಗಂಡನ ಶವದೊಂದಿಗೆ ಅಗ್ನಿ ಪ್ರವೇಶ ಮಾಡುವುದು ಅ ಸಾಮಾನ್ಯ ಮರಣ. ಇವುಗಳಲ್ಲಿ ದುರ್ಮರಣ ಹೇಡಿಂಯಾದವರ ವ್ಯವಹಾರ. ಅಸಾಮಾನ್ಯ ಮರಣ ವೀರನಾದವನ ಮಹಾಕಾರ್ಯವಾಗಿರುತ್ತದೆ.[೭] ಇವುಗಳಲ್ಲಿ ಯುದ್ಧದಲ್ಲಿ ಮಡಿದವರ ವೀರಗಲ್ಲು, ತುರುಗೋಳ್ ವೀರಗಲ್ಲು, ಬೇಟೆವೀರರ ವೀರಗಲ್ಲು, ಪೆಣ್ಬುಯ್ಯಲ್ ವೀರಗಲ್ಲು, ಉಳಿದವುಗಳಲ್ಲಿ ಹೋರಾಡಿದ ವೀರಗಲ್ಲು, ದಾರಿಗಳ್ಳರೊಡನೆ ಹೋರಾಡಿದ ವೀರಗಲ್ಲು, ಊರಗಡಿ ವಿವಾದದಲ್ಲಿ ಮಡಿದವರ ವೀರಗಲ್ಲು ಹೀಗೆ ವಿವಿಧ ಬಗೆಗಳಿವೆ.

## ಯುದ್ಧದಲ್ಲಿ ಮಡಿದ ವೀರರ ವೀರಗಲ್ಲು.

ರಾಜ್ಯದ ವಿಸ್ತರಣೆಗಾಗಿ ಅರಸರು ಯುದ್ಧ ಕೈಗೊಳ್ಳುತ್ತಿದ್ದರು. ಈಯುದ್ಧದಲ್ಲಿ ಸೈನಿಕರ ಸೊಲು-ಗೆಲುವುಗಳೇ ಅರಸರ ಸೋಲು ಗೆಲುವುಗಳಾಗಿದ್ದವು.[೮] ವೀರನು ಜೋಳವಾಳಿ ವೇಳೆವಾಳಿಗಳಿಗೆ ಬದ್ದರಾಗಿ ಯುದ್ದದಲ್ಲಿ ಹೋರಾಡಬೇಕಾಗುತ್ತದೆ. ಇಲ್ಲಿ ಮಡಿದ ವೀರನ ನೆನಪಿಗಾಗಿ ನೆಡುವಂತಹ ಸ್ಮಾರಕ ಯುದ್ದದಲ್ಲಿ ಮಡಿದ ವೀರರ ವೀರಗಲ್ಲುಗಳಾಗಿವೆ ಈ ವಿಷಯಕ್ಕೆ ಸಂಬಂಧಿಸಿದ ವೀರಗಲ್ಲುಗಳನ್ನು ಕೆಳಗಿನ ಉದಾಹರಣೆಯಲ್ಲಿ ಕಾಣಬಹುದು.

ಗಂಗರ ದೊರೆಯಾದ ಎರೆಯಪ್ಪನು ತನ್ನ ಪರವಾಗಿ ಹೋರಾಡಿ ಮಡಿದ 'ನಾಗತ್ತರ' ಎಂಬುವನಿಗೆ ವೀರಗಲ್ಲು ಹಾಕಿಸಿ, ಮಡಿದ ನಾಗರತ್ತನ ಮಗನಾದ ಇರುಗ ಎಂಬುವನಿಗೆ 'ನಾಗತ್ತರನಪಟ್ಟ'ವನ್ನು ನೀಡಿ, ತಂದೆಯನ್ನು ಕಳೆದುಕೊಂಡ ಇರುಗನಿಗೆ ಹಲವಾರು ಗ್ರಾಮಗಳನ್ನು ದತ್ತಿಯಾಗಿ ಬಿಡುತ್ತಾನೆ.[9]

ಮೋರಿಗೆರೆ ಗ್ರಾಮದ ಬ್ರಹ್ಮದೇವಾಲಯದಲ್ಲಿ ದೊರೆತ ವೀರಗಲ್ಲು ಶಾಸನ ರಹಿತ ಶಾಸನವಾಗಿದೆ. ಶಾಸನವು ತೃಟಿತವಾಗಿದೆ ಆ ಶಾಸನದಲ್ಲಿ ದಾಳಿ ನಡೆದ ಬಗ್ಗೆ ಹಾಗೂ ದಾಳಿಯಲ್ಲಿ ಹೋರಾಡಿ ಮಡಿದ ಒಬ್ಬ ವೀರನ ಸ್ಮರಣೆಗಾಗಿ ಈ ವೀರಗಲ್ಲು ಶಾಸನ ನಿಲ್ಲಿಸಿದಂತೆ ತಿಳಿದು ಬರುತ್ತದೆ. ಇದು ಸ್ಮಾರಕ ಶಾಸನವಾಗಿದೆ ಈ ವೀರಗಲ್ಲು ಶಾಸನವು ಮೂರು ಹಂತದ ಶಾಸನವಾಗಿದೆ. ಮೊದಲನೆಯ ಹಂತದಲ್ಲಿ ವೀರ ಹೋರಾಡುತ್ತಿರುವ ದೃಶ್ಯವಿದೆ. ಎರಡನೇ ಹಂತದಲ್ಲಿ ವೀರನನ್ನು ಇಬ್ಬರು ಸುರಾಂಗನೆಯರು ಹಿಡಿದುಕೊಂಡು ಹಾರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಶಿವಲಿಂಗದ ಸಾನಿಧ್ಯದಲ್ಲಿ ಕುಳಿತು ವೀರನು ಪೂಜಿಸುತ್ತಿರುವ ದೃಶ್ಯವಿದೆ. ಹಾಗೂ ಸೂರ್ಯ ಚಿತ್ರವಿದ್ದು, ಚಂದ್ರನಿರುವ ಭಾಗ ತುಂಡಾಗಿದೆ. ಈ ಶಾಸನದ ಮಧ್ಯದಲ್ಲಿ ಬರುವ ಪಟ್ಟಿಗಳಲ್ಲಿ ಶಾಸನ ಕೆತ್ತಲಾಗಿದೆ. ಮೇಲಿನ ಶಾಸನ ರಹಿತವಾದ ಪಟ್ಟಿ ಸ್ವಲ್ಪ ತುಂಡಾಗಿದ್ದು, ಶಿವಲಿಂಗದ ಮುಂದೆ ವೀರನು ಕುಳಿತಿರುವ ವ್ಯಕ್ತಿಯ ಶಿಲ್ಪದ ಅರ್ಧ ಭಾಗ ತುಂಡಾದ ದೃಶ್ಯವನ್ನು ಕಾಣುತ್ತೇವೆ.

ಇದೇ ಗ್ರಾಮದಲ್ಲಿ ಬ್ರಹ್ಮ ದೇವಾಲಯದಲ್ಲಿ ದೊರೆತ ವೀರಗಲ್ಲು ಶಾಸನ ರಹಿತ ಶಾಸನವಾಗಿದೆ. ಈ ಶಾಸನವು ಮೂರು ಹಂತಗಳನ್ನು ಮಾತ್ರ ಹೊಂದಿದೆ. ಕೆಳ ಭಾಗದ ಹಂತದಲ್ಲಿ ವೀರನು ಬಿಲ್ಲು ಬಾಣಗಳನ್ನು ಹಿಡಿದು ಕೊಂಡು, ಕುದುರೆ ಮೇಲೆ ಕುಳಿತು ಕತ್ತಿಯನ್ನು ಹಿಡಿದುಕೊಂಡ ವೀರನೊಂದಿಗೆ ಹೋರಾಡುವ ದೃಶ್ಯವನ್ನು, ಯುದ್ಧದಲ್ಲಿ ಹೋರಾಡುವಾಗ ಮಡಿದ ವೀರನ ಚಿತ್ರಣವನ್ನು ಕಾಣಬಹುದು. ಮೇಲ್ಭಾಗದ ಎರಡನೇ ಹಂತದಲ್ಲಿ ವೀರನನ್ನು ಸುರಾಂಗನೆಯರಿಬ್ಬರು ಹಿಡಿದುಕೊಂಡು ಹಾರುವ ದೃಶ್ಯವನ್ನು ಕಾಣಬಹುದು. ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಸಾನಿಧ್ಯದಲ್ಲಿ ಕುಳಿತು ವೀರನು ಪೂಜಿಸುತ್ತಿರುವ ದೃಶ್ಯವಿದೆ.

ಇದೇ ಗ್ರಾಮದಲ್ಲಿ ದೊರೆತ ವೀರಗಲ್ಲು ಶಾಸನ ರಹಿತ ಶಾಸನವಾಗಿದೆ ಆ ಶಾಸನದಲ್ಲಿ ದಾಳಿನಡೆದ ಬಗ್ಗೆ ಹಾಗೂ ದಾಳಿಯಲ್ಲಿ ಹೋರಾಡಿ ಮಡಿದ ಶಾಸನ: ಈ ವೀರಗಲ್ಲು ಶಾಸನವು ಮೂರುಹಂತದ ಶಾಸನವಾಗಿದೆ. ಮೊದಲನೆಯ ಹಂತದಲ್ಲಿ ಇಬ್ಬರು ವೀರರು ಶತ್ರುಗಳೊಂದಿಗೆ ಹೋರಾಡುತ್ತಿರುವಂತೆ, ಅವರ ಕಾಲ ಬಳಿ ಕುದುರೆಗಳು ಹಾಗೂ ಬಿದ್ದಿರುವ ಹೆಣದ ದೃಶ್ಯವನ್ನು ಕಾಣಬಹುದು. ಎರಡನೇಯ ಹಂತದಲ್ಲಿ ವೀರನು ಧ್ಯಾನ ಮಗ್ನನಾಗಿ ಕುಳಿತಿರುವ ದೃಶ್ಯ ಹಾಗೂ ಅಕ್ಕ-ಪಕ್ಕದಲ್ಲಿ ಸುರಾಂಗನೆಯರಿದ್ದಾರೆ. ಮೂರನೇ ಹಂತದಲ್ಲಿ ಶಿವಲಿಂಗ ಬಳಿ ವೀರನು ನಿಂತಿರುವ ದೃಶ್ಯವನ್ನು ಕಾಣಬಹುದು.

### ತುರುಗೋಳ್ ವೀರಗಲ್ಲು

ಪ್ರಾಚೀನ ಕರ್ನಾಟಕದಲ್ಲಿ ಜಾನುವಾರು, ಗೋವುಗಳನ್ನು ಆರ್ಥಿಕ ಸಂಪನ್ಮೂಲಗಳೆಂದು ಪರಿಗಣಿಸುತ್ತಿದ್ದರು. ಇವುಗಳನ್ನು ಯಾರಾದರೂ ಬಿಡಿಸಿಕೊಂಡು ಬರಲು ಹೋಗಿ ಮರಣಿಸಿದ ವ್ಯಕ್ತಿಯ ಸ್ಮಾರಕವಾಗಿ ನೆಡುವಂತಹವು ತುರುಗೋಳ್ ವೀರಗಲ್ಲುಗಳಾಗಿವೆ.[೧೦] ಈ ರೀತಿಯ ಶಾಸನಗಳು ಮೋರಿಗೆರೆಯಲ್ಲಿ ಕಂಡು ಬರುವುದಿಲ್ಲ.

### ಬೇಟೆ ವೀರರ ವೀರಗಲ್ಲು

ದುಷ್ಟ ಮೃಗಗಳಾದ ಹುಲಿ, ಆನೆ, ಕಾಡು ಹಂದಿಗಳನ್ನು ಬೇಟೆಯಾಡಿದವರು ಇಲ್ಲವೇ ಬೇಟೆಯಾಡುವ ಸಮಯದಲ್ಲಿ ಮಡಿದವರಿಗಾಗಿ ಸ್ಮಾರಕಗಳನ್ನು ನಿಲ್ಲಿಸಿರುತ್ತಾರೆ. ಬೇಟೆಯ ವೀರಗಲ್ಲುಗಳಲ್ಲಿ ಮನುಷ್ಯರಿಗಾಗಿ ನಿಲ್ಲಿಸಿದ ವೀರಗಲ್ಲುಗಳಂತೆ ಮಾನವನ ಸಹಾಯಕ್ಕಾಗಿನಿಂತ ಪ್ರಾಣಿಗಳ ಸ್ಮಾರಕಗಳಾಗಿವೆ[೧೧] ಆತಕೂರಿನ ಶಾಸನವು 'ಕಾಳಿ' ಎಂಬ ನಾಯಿಯ ಪರಾಕ್ರಮವನ್ನು ವರ್ಣಿಸಿದರೆ ಯಲಹಂಕ ಗ್ರಾಮದ ಸ್ಮಾರಕವು 'ಚಾವುಂಡಿ' ಎಂಬ ನಾಯಿಯ ಬಗ್ಗೆ ತಿಳಿಸುತ್ತದೆ. ಕ್ರಿ.ಶ.೯೭೫ ರ ಕೋಲಾರ ಜಿಲ್ಲೆ ಮೇಲೂಗಣಿ ಗ್ರಾಮದ ಶಾಸನ 'ತೋಕ' ಎಂಬ ನಾಯಿ ೭೫ ಹಂದಿಗಳನ್ನು 'ಧಳಗ' ಎಂಬ ನಾಯಿ ೨೬ ಹಂದಿಗಳನ್ನು ಕೊಂದು ಮರಣ ಹೊಂದಿದ್ದನ್ನು ದಾಖಲಿಸಿದೆ.[೧೨] ಮೋರಿಗೆರೆಯಲ್ಲಿ ಈ ರೀತಿಯ ಸ್ಮಾರಕಗಳು ಕಂಡುಬರುವುದಿಲ್ಲ.

### ಪೆಣ್ಬುಯ್ಯಲ್ ವೀರಗಲ್ಲು

ಹೆಣ್ಣಿನ ಆರ್ತ ಧ್ವನಿಗೆ ಪೆಣ್ಬುಯಲ್ ಎಂದರ್ಥ. ಅಕ್ಕ ಪಕ್ಕದ ದಾಳಿಕೋರರು ಯುದ್ಧಕ್ಕೆ ಬಂದು ಸ್ತ್ರೀಯರ ಮೇಲೆ ಅತ್ಯಾಚಾರ ಮಾಡುತ್ತಿದ್ದರು. ಅವರ ಸೀರೆಯನ್ನು ಹರಣ ಮಾಡುವುದರಿಂದ ಯುದ್ದ ಸಾರುತ್ತಿದ್ದರು. ಇಂತಹ ಸಂಧರ್ಭದಲ್ಲಿ ಊರಿನ ವೀರರು ಸ್ತ್ರೀ ವಿಮೋಚನೆಗಾಗಿ ಹೋರಾಡುತ್ತಿದ್ದರು. ಪರಂಪರಾಗತವಾಗಿ ನಡೆದು ಬಂದ ಇಂಥ ಘಟನೆಗಳನ್ನು ವೀರಗಲ್ಲುಗಳು ದಾಖಲಿಸುತ್ತವೆ. ವೈರಿಗಳು ಹೆಣ್ಣು ಮಕ್ಕಳ ಮಾನಭಂಗಕ್ಕೆ ಪ್ರಯತ್ನಿಸಿದ್ದನ್ನು ಶಾಸನಗಳು "ಪೆಂಡಿರ ಎಡೆಯುರ್ಚುವಲ್ಲಿ" ಎಂಬ ಪದದಿಂದ ಸೂಚಿಸುತ್ತವೆ.[೧೩]

ಸುಮಾರು ೧೨ ನೇ ಶತಮಾನದ ಅಬ್ಬಲೂರಿನ ಎರಡು ವೀರಗಲ್ಲುಗಳಲ್ಲಿ[೧೪] ಮಹಿಳೆಯರ ಮಾನಭಂಗಕ್ಕೆ ಮುಂದಾದ ಆಕ್ರಮಣಕಾರರನ್ನು ಹಿಮ್ಮೆಟ್ಟಿಸಿದ ವೀರನ ಚಿತ್ರವನ್ನು ಜೊತೆಗೆ ಮಾನಭಂಗಕ್ಕೆ ಒಳಗಾದ ಸ್ತ್ರೀಯರು ಒಂದು ಕೈ ಯಿಂದ ತಮ್ಮ ಮರ್ಮಾಂಗವನ್ನು ಇನ್ನೊಂದು ಕೈಯಿಂದ ಸ್ತನಗಳನ್ನು ಮುಚ್ಚಿಕೊಂಡು ಅವಮಾನದಿಂದ ತಲೆ ಬಗ್ಗಿಸಿನಿಂತ ಶಾಸನ ಶಿಲ್ಪ ಮನೋಜ್ಞವಾಗಿದೆ. ಮೋರಿಗೆರೆಯಲ್ಲಿ ಈ ರೀತಿಯ ಸ್ಮಾರಕಗಳು ಕಂಡುಬರುವುದಿಲ್ಲ.

### ಊರಳಿವುಗಳಲ್ಲಿ ಹೋರಾಡಿದ ವೀರಗಲ್ಲು

ಪ್ರಾಚೀನ ಕಾಲದಲ್ಲಿ ಹಳ್ಳಿಗಳಿಗೆ ಕಳ್ಳರು ನುಗ್ಗಿಲೂಟಿ ಮಾಡುತ್ತಿದ್ದರು 'ಊರುಕೆಟ್ಟು ಸೂರೆ ಮಾಡುವಾಗ ಆಗಿಗಾರು ಇಲ್ಲವಯ್ಯ' ಎಂಬಂತೆ ಇಡೀ ಗ್ರಾಮವೇ ಅಧಿರ ಮನಸ್ಥಿತಿಯಲ್ಲಿರುತ್ತಿತ್ತು. ಈ ಸಮಯದಲ್ಲಿ ಎದೆಗುಂದದೆ ನಿಂತು ಊರನ್ನು ರಕ್ಷಿಸುವುದು ವೀರರ ಧ್ಯೇಯವಾಗಿತ್ತು ಇಂತವರ ನೆನಪಿಗಾಗಿ ನೆಡುವಂತಹ ಸ್ಮಾರಕ ಇದಾಗಿದೆ.[೧೫]

ಊರಿಗೆ ಮುತ್ತಿದ ಕಳ್ಳರೊಂದಿಗೆ ಕಾದಾಡಿ 'ಸತ್ತ' ಬವನ ಎಂಬುವನ ವೃತ್ತಾಂತವನ್ನು ಗೆಂಡ್ಲ ಗ್ರಾಮದ ವೀರಗಲ್ಲು ತಿಳಿಸುತ್ತದೆ.[೧೬] ಮೋರಿಗೆರೆಯಲ್ಲಿ ಈ ರೀತಿಯ ಸ್ಮಾರಕಗಳು ಕಂಡುಬರುವುದಿಲ್ಲ.

### ದಾರಿಗಳ್ಳರೊಡನೆ ಹೋರಾಡಿದ ವೀರಗಲ್ಲು

ಪ್ರದೇಶದಿಂದ ಪ್ರದೇಶಕ್ಕೆ ವ್ಯಾಪಾರದ ಸಲುವಾಗಿಯೋ ಇಲ್ಲವೇ ಪ್ರಯಾಣದ ಉದ್ದೇಶದಿಂದಲೋ ಹೊರಟಾಗ ಪ್ರಯಾಣಿಕರ ಮೇಲೆ ದಾರಿಗಳ್ಳರು ಎರಗಿ ಬಂದು ಅವರ ಬಳಿಯಿರುವ ಒಡವೆ ವಸ್ತುಗಳನ್ನು ದೋಚುತ್ತಿದ್ದರು ಇವರಿಗೆ ಹೆದರದೇ ಇವರನ್ನು ಪ್ರತಿಭಟಿಸಿ ನಿಂತು ಹೋರಾಡಿದ ವೀರರ ಸ್ಮಾರಕಗಳು ಇವಾಗಿವೆ.[೧೭]

ಕ್ರಿ.ಶ.೧೯೧ರಲ್ಲಿ ವೀರಗಲ್ಲು ಶಾವರಣ್ಣ ಹಾಗೂ ಸಾದಾ ಎಂಬುವವರು ಹನಿಯೂರು ಗ್ರಾಮದ ಸಂತೆಗೆ ಹೋಗಿ ಬರುವಾಗ ದಾರಿಯಲ್ಲಿ ಕಳ್ಳರು ಅವರನ್ನು ಮುತ್ತಿಗೆ ಹಾಕುತ್ತಾರೆ. ಇವರೀರ್ವರು ಕಳ್ಳರೊಂದಿಗೆ ವೀರಾವೇಶದಿಂದ ಹೋರಾಡುತ್ತಾರೆ. ಈ ಹೋರಾಟದಲ್ಲಿ ಶಾವರಣ್ಣ ಸಾಯುತ್ತಾನೆ ಅವನ ಸ್ಮರಣಾರ್ಥ ತಂದೆ ಮತ್ತು ಸಹೋದರರು ವೀರಗಲ್ಲನ್ನು ಹಾಕಿಸುತ್ತಾರೆ.[೧೮] ಮೋರಿಗೆರೆಯಲ್ಲಿ ಇಂತಹ ಸ್ಮಾರಕಗಳು ಕಂಡು ಬರುವುದಿಲ್ಲ.

### ಊರಗಡಿ ವಿವಾದದಲ್ಲಿ ಮಡಿದವರ ವೀರಗಲ್ಲು.

ಇಂದಿಗೂ ಹಳ್ಳಿಯಿಂದ ಮತ್ತೊಂದು ಹಳ್ಳಿಯ ನಡುವೆ ಗಡಿಕಲ್ಲು (ಸೀಮೆಕಲ್ಲು) ನೆಟ್ಟಿರುತ್ತಾರೆ ಗ್ರಾಮಗಳ ನಡುವೆ ಕೆಲವು ಸಲ ಗಡಿಗಳ ಬಗ್ಗೆ ಜಗಳಗಳು ನಡೆಯುತ್ತಿದ್ದವು ಈ ಜಗಳದಲ್ಲಿ ಮಡಿದವರ ನೆನಪಿಗಾಗಿ ಆಯಾ ಗ್ರಾಮದವರು ಸ್ಮಾರಕಗಳನ್ನು ನಡೆಸುತ್ತಿದ್ದರು.[೧೯] ಚಿಕ್ಕಮಗಳೂರು ತಾಲೂಕಿನ ಶಾಸನವೊಂದು[೨೦] ಊರಗಡಿ ವಿವಾದಕ್ಕೆ ಸಂಬಂಧಿಸಿದ ವಿವರವನ್ನು ಹೀಗೆ ದಾಖಲಿಸಿದೆ 'ಉಪ್ಪರವಳ್ಳಿ' ಎಂಬ ಗ್ರಾಮದವರಿಗೂ ಮತ್ತು ಆ ಗ್ರಾಮದ ಅಕ್ಕಪಕ್ಕದ ಗ್ರಾಮದವರಿಗೂ ಸೀಮಾ ಸಂಬಂಧದಲ್ಲಿ ವ್ಯಾಜ ನಡೆಯುತ್ತಿರುವಾಗ ಈ ಅನ್ಯಾಯವನ್ನು ಕಂಡು ಬೇರೆ ಊರಿನ ಹಿರಿಯರು ನಡುವೆ ಪ್ರವೇಶಮಾಡಿ ವೃಥಾ ಸಾವು ನೋವು ಸಲ್ಲದು ಎಂದು ಇಬ್ಬರಿಗೂ ಬುದ್ದಿವಾದ ಹೇಳಿ ಹಿಂದಿನ ದಾಖಲೆಗಳನ್ನು ಪರಿಶೀಲಿಸಿ ಮೇರೆಗಳನ್ನು ನಿಗದಿಮಾಡಿ ಜಗಳದಲ್ಲಿ ಮಡಿದವ್ಯಕ್ತಿಗಳ

ಮನೆಯವರಿಗೆ ಪರಿಹಾರ ದೊರಕಿಸಿಕೊಡುತ್ತಾರೆ. ಇಂತಹ ವೀರಗಲ್ಲುಗಳು ಮೋರಿಗೆರೆ ಪರಿಸರದಲ್ಲೆಲ್ಲೂ ಕಂಡು ಬರುವುದಿಲ್ಲ.

### ಮಾಸ್ತಿ ಕಲ್ಲು

ಮಾಸ್ತಿ ಎಂಬ ಪದವು ಮಹಾಸತಿಯ ಸಂಕ್ಷಿಪ್ತ ರೂಪ ಮಹಾಸತಿ–ಮಾಸತಿ–ಮಾಸ್ತಿ ಹೀಗೆ ಸಂಕ್ಷಿಪ್ತರೂಪವನ್ನು ಪಡೆದಿದೆ. ದಾನ ಶಾಸನಗಳು ವೀರಗಲ್ಲುಗಳ ನಂತರ ಮಹಾಸತಿ ಕಲ್ಲುಗಳು ಮೂರನೆಯ ಸ್ಥಾನ ಪಡೆದಿವೆ. ಗಂಡ ಸತ್ತಾಗ ಚಿತೆಯನ್ನು ಪ್ರವೇಶ ಮಾಡುವ ಸತಿಯರ ಸ್ಮಾರಕಗಳೇ ಮಾಸ್ತಿಕಲ್ಲು.[೨೧] ಮಹಾಸತಿಯ ಆಚರಣೆಯಲ್ಲಿ ಎರಡು ಪದ್ಧತಿಗಳಿವೆ. ಅವುಗಳಲ್ಲಿ ಒಂದು ಸಹಗಮನ ಇನ್ನೊಂದು ಅನುಗಮನ, ಗಂಡ ಸತ್ತಾಗ ಮಡದಿ ಗಂಡನ ಚಿತೆಯೊಂದಿಗೆ ಪ್ರವೇಶ ಮಾಡಿ ಸಾಯುವ ವಿಧಾನವನ್ನು ಸಹಗಮನ,[೨೨] ಗಂಡಸತ್ತ ವಿಷಯವನ್ನು ಕೇಳಿ ಗಂಡನನ್ನು ಸೇರಲು ಅಗ್ನಿಕುಂಡ ನಿರ್ಮಿಸಿಕೊಂಡು ಸಾಯುತ್ತಿದ್ದ ವಿಧಾನಕ್ಕೆ ಅನುಗಮನ ಎಂದು ಕರೆಯುತ್ತಾರೆ.[೨೩] ಮಹಾಸತಿಕಲ್ಲುಗಳಲ್ಲಿ ಒಕ್ಕೈ ಮಾಸ್ತಿಗಲ್ಲು ಇಕ್ಕೈ ಮಾಸ್ತಿಗಲ್ಲು ಎಂದಿದೆ. ಇಬ್ಬರು ಸತಿ ಹೊದ ಪ್ರಸಂಗಕ್ಕೆ ಇಕ್ಕೈಮಾಸ್ತಿಗಲ್ಲು ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಇಲ್ಲಿ ವೀರನಿಗಿಂತ ಸತಿಗೆ ಹೆಚ್ಚು ಪ್ರಾಧಾನ್ಯ ಮಹಾಸತಿಯ ಘಟನೆಯನ್ನು ತಿಳಿಯಲು ಸಾಂಕೇತಿಕವಾಗಿ ಕಂಬದಿಂದ ಹೊರಟ ಕೈಯನ್ನು ಚಿತ್ರಿಸಿರುತ್ತಾರೆ, ಇದನ್ನು ತೋಳುಗೈ, ವ್ಯಾಸನತೋಳು, ಒಕ್ಕೈ ಮಾಸ್ತಿಗಲ್ಲು ಎಂದು ಕರೆಯುತ್ತಾರೆ.

ಕ್ರಿ.ಶ.೧೦೫೩ರ ಬೆಳತೂರಿನ ದೇಕಬ್ಬೆಯ ಶಾಸನ ಗಮನಾರ್ಹವಾದುದು. ಇಲ್ಲಿ ಪತಿ ಸಾವನ್ನು ಕೇಳಿ ದೇಕಬ್ಬೆ ಅಗ್ನಿ ಪ್ರವೇಶ ಮಾಡುತ್ತಾಳೆ.[೨೪] ಅಂಕಿನಹಳ್ಳಿಯ ಒಕ್ಕೈ ಮಾಸ್ತಿಗಲ್ಲು ಬಳ್ಳಿಗಾವೆ ಬಂದಳಿಕೆ ಮುಂತಾದ ಕಡೆಗಳಲ್ಲಿ ದೊರೆತಿವೆ. ಇದಕ್ಕೆ ಅಪವಾದ ಎಂಬಂತೆ ಧಾರವಾಡ ಜಿಲ್ಲೆಯ ಸಾತೇನಹಳ್ಳಿಯಲ್ಲಿ ಆರು ಕೈಗಳಿರುವ ಮಾಸ್ತಿಗಲ್ಲು ಚಿತ್ರಿತವಾಗಿದೆ.

ಮೋರಿಗೆರೆ ಗ್ರಾಮದ ಬ್ರಹ್ಮ ದೇವಾಲಯದಲ್ಲಿ ದೊರೆತ ಮಾಸ್ತಿಗಲ್ಲು ಶಾಸನರಹಿತ ಶಾಸನವಾಗಿದೆ. ಈ ಶಾಸನವು ಶೈವ ಶಾಸನವಾಗಿದ್ದು. ಎರಡು ಹಂತಗಳನ್ನು ಮಾತ್ರ ಹೊಂದಿದೆ ಈ ಮಾಸ್ತಿಗಲ್ಲು ಶಾಸನವು ನೋಡಿದರೆ ವೀರನಿಗೆ ಇಬ್ಬರು ಪತ್ನಿಯರಿದ್ದು ಯುದ್ಧಕ್ಕೆ ಹೋದಾಗ ವೀರನು ಮಡಿದ ಸುದ್ದಿಯನ್ನು ಕೇಳಿ ಮಹಾಸತಿಯರಿಬ್ಬರು ಕೈಗಳಲ್ಲಿ ನಿಂಬೆಹಣ್ಣುಗಳನ್ನು ಹಿಡಿದು ಇಬ್ಬರು ಬಲಗೈ ಮೇಲೆ ಎತ್ತಿದ್ದಾರೆ. ಇವರಿಬ್ಬರ ಮಧ್ಯೆ ವೀರನು ಕೈ ಮುಗಿದು ಕುಳಿತು ಕೊಂಡಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ಶಿವಲಿಂಗದ ಮುಂದೆ ವೀರನು ನಿಂತು ಕೊಂಡು ಆರಾಧನೆಯಲ್ಲಿ ತೊಡಗಿರುವ ದೃಶ್ಯ ಶಿವಲಿಂಗಕ್ಕೆ ಎದುರಾಗಿ ವೃಷಭ ಬಲಗಾಲನ್ನು ಚಾಚಿಕೊಂಡು ಆಸೀನನಾಗಿರುವ ದೃಶ್ಯ, ಅವರ ಅಕ್ಕ–ಪಕ್ಕಗಳಲ್ಲಿ ಸೂರ್ಯ ಚಂದ್ರರಿಬ್ಬರು ಇರುವ ಚಿತ್ರವನ್ನು ಕಾಣಬಹುದು.

## ಇತರೆ

ತನ್ನ ಕೋರಿಕೆಯನ್ನು ಈಡೇರಿಸಲು ಮನುಷ್ಯನು ದೇವರಿಗೆ ಹರಕೆಯನ್ನು ಒಪ್ಪಿಸುವುದು ಈಗಲೂ ಪ್ರಚಲಿತದಲ್ಲಿರುವ ವಿಷಯವಾಗಿದೆ. ಅದು ಹಣ, ಶ್ರಮ ಅಥವಾ ಮಾನಸಿಕ ದಂಡನೆಯ ರೂಪದಲ್ಲಿರುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ಇವೆಲ್ಲವೂಗಳ ಜೊತೆಯಲ್ಲಿ ಕೆಲವರು ಪ್ರಾಣವನ್ನು ಅರ್ಪಿಸುತ್ತಿದ್ದರು. ದೇವರಿಂದ ಸೃಷ್ಟಿಯಾದ ಈ ಜೀವ ಮತ್ತೆ ದೇವರ ಸನ್ನಿಧಿಗೆ ಹೋಗಲಿ ಎಂದು ಅವರು ನಂಬಿದ್ದರು.[೨೫] ಧಾರ್ಮಿಕ ವಿಧಿ ವಿಧಾನಗಳ ಸಂಧರ್ಭದಲ್ಲಿ ಹರಕೆ ಹೊತ್ತವರು ದೇವರ ಸನ್ನಿಧಿಯಲ್ಲಿ ರುಂಡವನ್ನು ಕತ್ತರಿಸಿಕೊಳ್ಳುತ್ತಿದ್ದರು ಇಂತಹವರ ನೆನಪಿಗಾಗಿ ನೆಡುತ್ತಿದ್ದ ಸ್ಮಾರಕವೇ ಸಿಡಿತಲೆಗಲ್ಲು. ಮೋರಿಗೆರೆ ಪರಿಸರದಲ್ಲಿ ಇಂತಹ ಸ್ಮಾರಕಗಳು ಕಂಡುಬರುವುದಿಲ್ಲ.

**ಶಾಸನ ಸಾಹಿತ್ಯ**

ಶಾಸನಗಳು ಪ್ರಮುಖವಾಗಿ ಪ್ರಾರಂಭದ ಹಂತದಲ್ಲಿ ಪ್ರಾರ್ಥನಾಸ್ತುತಿ, ರಾಜರ ವರ್ಣನೆ, ದಾನ ಕೊಟ್ಟ ವ್ಯಕ್ತಿಗಳ ಉಲ್ಲೇಖ, ವಂಶಾವಳಿ, ಭೂಪ್ರದೇಶದ ಜೊತೆಗೆ ಶಾಪಾಶಯಗಳನ್ನು ಹೇಳುವುದು ಶಾಸನ ಕವಿಯ ಕರ್ತವ್ಯವಾಗಿತ್ತು. ಜೊತೆಗೆ ಕವಿಯು ತನ್ನತನವನ್ನು ತೋರಿಸಿದ ಹಂಬಲದಲ್ಲಿ ತನ್ನ ಕಾವ್ಯ ಪ್ರೌಢಿಮೆಯನ್ನು ತೋರಿಸಿದ ನಿದರ್ಶನಗಳಿವೆ. ನಮಗೆ ಇಲ್ಲಿಯವರೆಗೆ ದೊರೆತಿರುವ ಶಾಸನಗಳಲ್ಲಿ ಮೊಟ್ಟ ಮೊದಲನೆಯ ಶಾಸನವೆಂದರೆ ಸುಮಾರು ಕ್ರಿ.ಶ.೪೫೦ರ ಹಲ್ಮಿಡಿ ಶಾಸನ, ನಂತರದ ಕಾಲದಲ್ಲಿ ಶಾಸನಗಳು ಕಂಡುಬಂದರು, ಸು.ಕ್ರಿ.ಶ.೯ನೆಯ ಶತಮಾನದ ನಂತರದ ಕನ್ನಡ ಶಾಸನಗಳಲ್ಲಿ ದೀರ್ಘವಾದ ಕಾವ್ಯಗಳು ದೊರೆಯುತ್ತವೆ. ತಮಟಕಲ್ಲಿನ 'ಗುಣ ಮದುರನ ಶಾಸನ' ವೃತ್ತದಲ್ಲಿದ್ದರೆ, ಬಾದಾಮಿಯ 'ಕಪ್ಪೆ ಅರಭಟ್ಟನ ಶಾಸನ' ಮೊಟ್ಟ ಮೊದಲು ತ್ರಿಪದಿಯಲ್ಲಿ[೨೬] ರಚನೆಯಾಗಿದೆ. 'ಮಾವಳಿಶಾಸನ' ಶ್ರವಣ ಬೆಳಗೊಳದ ಕೆಲವು ಶಾಸನಗಳು ಜೈನ ಮುನಿಗಳ ಜೀವನಾದರ್ಶನವನ್ನು ಕಾವ್ಯತ್ಮಕವಾಗಿ, ಸಾಹಿತ್ಯಕವಾಗಿ ಪ್ರಕಟಪಡಿಸುವುದನ್ನು ಕಾಣಬಹುದು.

ಮೋರಿಗೆರೆ ಗ್ರಾಮದಲ್ಲಿ ದೊರೆಯುವ ರಾಜ ಮನೆತನಗಳ ಶಾಸನಗಳಲ್ಲಿ ಸಾಹಿತ್ಯದ ಕೃಷಿ ಮಾಡಿರುವ ಉಲ್ಲೇಖಗಳು ಕಂಡುಬರುವುದು ಕಡಿಮೆ. ಆದರೆ ಅವುಗಳನ್ನು ರಚಿಸಿದ ಕೆಲವು ಶಾಸನಗಳು ಕವಿಗಳ, ಲಿಪಿಕಾರರ ಹೆಸರುಗಳನ್ನು ಮಾತ್ರ ತಿಳಿಯಪಡಿಸುತ್ತವೆ. ಇಲ್ಲಿಯ ಬಹುತೇಕ ಶಾಸನಗಳು ದಾನದತ್ತಿಗಳಿಗೆ, ಸಾಮಾಜಿಕ ಕಾರ್ಯಗಳಿಗೆ, ದೇವಾಲಯದ ನಿರ್ಮಾಣಕ್ಕೆ ನೀಡಿದ ದಾನ ಶಾಸನಗಳಾಗಿದ್ದು, ಇಲ್ಲಿ ಯಾವುದೇ ರಾಮಾಯಣ, ಮಹಾಭಾರತ, ಪುರಾಣಗಳಿಗೆ ಸಂಬಂಧಿಸಿದ ವ್ಯಕ್ತಿಗಳಿಗೆ ಹೋಲಿಕೆ ನೀಡಿರುವ ಪ್ರಸಂಗಗಳು ಕಂಡುಬರುವುದಿಲ್ಲ. ಹಾಗೂ ಕಾವ್ಯಾತ್ಮಕವಾಗಿ ಕಂಡುಬರುವುದು

ಬಹಳ ವಿರಳ. ಇಲ್ಲಿಯ ಶಾಸನಗಳ ಪ್ರಾರಂಭದಲ್ಲಿ ದೇವಸ್ತುತಿಗಳನ್ನು ಕಾಣುತ್ತೇವೆ. ಅಥವಾ ಶ್ಲೋಕಗಳನ್ನು ಕಾಣುತ್ತೇವೆ. ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ಮಂಗಳ ಕೆಲಸವನ್ನು ಮಾಡುವ ಮೊದಲು ಶುಭವಾಚಕದಿಂದ ಪ್ರಾರಂಭವಾಗುವುದು ಬಹುಹಿಂದಿನಿಂದಲೂ ಬೆಳೆದು ಬಂದಿರುವ ಸಾಹಿತ್ಯ ರೂಪವಾಗಿದೆ.

ಶಾಸನಗಳು ಪ್ರಾರಂಭ ಕಾಲದಿಂದಲೂ ಪ್ರೌಢವಾದ ಚಂಪು ಶೈಲಿಯನ್ನು ಮಾದರಿಯಾಗಿಟ್ಟುಕೊಂಡು ರಚಿತವಾಗಿವೆ. ಈ ವೇಳೆಗಾಗಲೇ ಚಂಪೂ ಮಾರ್ಗ ಒಂದು ನಿಶ್ಚಿತ ರೂಪವನ್ನು ಪಡೆದುಕೊಂಡಿದ್ದರಿಂದ, ಇದರ ಪ್ರಭಾವ ಶಾಸನ ಪಾಠಗಳ ಮೇಲೆ ಬೀರಿರುವುದನ್ನು ಕಾಣಬಹುದು. ಹನ್ನೆರಡನೆಯ ಶತಮಾನದತರುವಾಯ ಕನ್ನಡ ಸಾಹಿತ್ಯದಲ್ಲಿ ದೇಸಿ ಸಾಹಿತ್ಯ ಪ್ರಕಾರಗಳಾದ ವಚನ, ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ ಇತ್ಯಾದಿ ಪ್ರಕಾರಗಳು ರೂಪುಗೊಂಡು ಜನಪ್ರಿಯತೆಯನ್ನು ಪಡೆದವು. ಪ್ರಾಚೀನ ಕಾಲದ ಶಾಸನಗಳು ಬಹುಮಟ್ಟಿಗೆ ಚಂಪೂ ಶೈಲಿಯನ್ನು ಅನುಸರಿಸಿದವು.

ಮೋರಿಗೆರೆಯಲ್ಲಿ ದೊರೆತ ಬಹುಪಾಲು ಶಾಸನಗಳು ದಾನಕ್ಕೆ ಸಂಬಂಧಿಸಿದವುಗಳಾಗಿವೆ. ದೇವಾಲಯ, ಮಠ ಮತ್ತು ವ್ಯಕ್ತಿಗಳಿಗೆ ನೀಡಿದ ದಾನಗಳನ್ನು ಕುರಿತವುಗಳಾಗಿರುವುದರಿಂದ, ಶಾಸನಗಳ ವಿಷಯ ನಿರೂಪಣೆಯು ಬಹುತೇಕ ಒಂದೇ ಬಗೆಯಾಗಿರುವುದರಿಂದ ಶಾಸನಗಳು ಆರಂಭದಲ್ಲಿ ಇಷ್ಟದೇವತಾಸ್ತುತಿ, ಕೊನೆಯಲ್ಲಿ ಶಾಪಾಶಯ ಮತ್ತು ಫಲಶೃತಿ ವಾಕ್ಯಗಳು ಕಂಡುಬರುತ್ತವೆ. ಬಿರುದಾವಳಿ ಮತ್ತು ದತ್ತಿ ವಿವರಗಳು ಹೆಚ್ಚಾಗಿ ಗದ್ಯದಲ್ಲಿದೆ, ಇಲ್ಲಿ ದೊರೆತ ಶಾಸನದ[೨೭] ವ್ಯಕ್ತಿಯ ವರ್ಣನೆಯನ್ನು ಅವನ ಬಿರುದಾವಳಿಗಳನ್ನು ಈ ರೀತಿಯಾಗಿ ಬಣ್ಣಿಸಲಾಗಿದೆ.

"ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ
ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾ
ರಕ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಂ
ಶ್ರಿ ಜಯಸಿಂಹ ವಲ್ಲಭಾಗ್ರಜಂ ಚಲದಂಕರಾಮಂ
ತ್ರಿಲೋಕ್ಯಮಲ್ಲಂ ಶ್ರೀ ಮದಾಹವ ಮಲ್ಲದೇವ ವಿಜಯರಾಜ್ಯ
ಮುತ್ತರೋತ್ತರಾಭವೃದ್ಧಿ ಪ್ರರ್ಧ
ಮಾನವಾ ಚನ್ದ್ರಾರ್ಕ್ಕತಾರಂ ಸಲುತಿರೆ ಸ್ವಸ್ತಿ ಸಮಗಧಿತ
ಪಂಚಮಹಾಶಬ್ದಪಲ್ಲವಾನ್ವಯ ಶ್ರೀ ಪೃಥ್ವೀವಲಭಂ ಪಲ್ಲವ
ಕುಳತಿಳಕನೇಕವಾಕ್ಯಂ ಕಾಚೀಪುರವರೇಶ್ವರಂ

ಕೆಳಗಿನ ಶಾಸನದಲ್ಲಿ[೨೮] ದೇವತಾ ಸ್ತುತಿಯೊಂದಿಗೆ ಹೊಗಳಿಕೆಯ ವರ್ಣನೆಯನ್ನು ನಾವು ಇಲ್ಲಿ ತಿಳಿಯಬಹುದು.

"ಸಹಪ್ರಾಣಿ ವಿಷ್ಣಾಯಂ ಜಾಯತೇ ಕ್ರಿಮಿಃ॥ ಯತ್ಪ್ರದಾನಾದ್ವಸೇತ್ಸ್ವರ್ಗೋ ಯಾವತ್ಕಾಳಸ್ಯ
ಸಂಖ್ಯಯಾ।ತಸ್ಮಾಚ್ಛತಗುಣಂ ಕಾಲಂ ತದ್ವ
ಕೇ ವಸೇತ್ ಸಾಮಾನ್ಯೋಯಂ ಧರ್ಮ್ಮದೇತುನ್ರ
ಪಾಣಾಂ ಕಾಲೇ ಕಾಳೇ
ಯೋ ಭೂಯೋಯಾಚತೇ ರಾಮ ಶ್ರೀ ಮದಣ್ಣಿಗೇರಿ
ಯ ನಗರೇಶ್ವರ ವಿದ್ಯಾಭರಣಜೀಯ"

## ಛಂದಸ್ಸು

ಕನ್ನಡ ಛಂದಸ್ಸಿನ ಅಧ್ಯಯನದ ಸಂಧರ್ಭದಲ್ಲಿ ಶಾಸನಗಳು ಬಹುಮುಖ್ಯವಾದ ಪಾತ್ರವಹಿಸುತ್ತವೆ. ಶಾಸನಗಳು ಅನೇಕ ಪ್ರಕಾರದ ಛಂದಸ್ಸಿನ ರೂಪಗಳನ್ನು ಹೊಂದಿವೆ. ಇವುಗಳಲ್ಲಿ ಕಂಡುಬರುವ ಛಂದಸ್ಸಿನ ಪ್ರಕಾರಗಳ ಮೂಲಕ ಛಂಧಸ್ಸಿನ ಪ್ರಾಚೀನತೆ, ಛಂದಸ್ಸಿನ ಬೆಳವಣಿಗೆ ಹಾಗೂ ಅವುಗಳಲ್ಲಿನ ಭಿನ್ನತೆಯನ್ನು ಗುರುತಿಸಲು ಶಾಸನಗಳು ಅತಿ ಮುಖ್ಯವಾಗಿವೆ. ಮೋರೆಗೆರೆಯಲ್ಲಿ ಬರುವ ಶಾಸನಗಳಲ್ಲಿ ಬಹುತೇಕ ಅಕ್ಷರ ವೃತ್ತಗಳು ಬಳಕೆಯಾಗಿದ್ದು ಇಲ್ಲಿ ಛಂದೋ ಪ್ರಕಾರಗಳು ಕಂಡುಬರುವುದು ಬಹುಮುಖ್ಯವಾಗಿ ಪದ್ಯಮಯ ಶಾಸನಗಳಲ್ಲಿ ಮಾತ್ರ. ಕನ್ನಡದ ಬಹಳಷ್ಟು ಶಾಸನಗಳು ಚಂಪೂವಿನ ಛಂದೋ ವೈವಿದ್ಯತೆಯನ್ನು ಎಲ್ಲಾ ಕಾಲಕ್ಕೂ ಅಳವಡಿಸಿಕೊಂಡಿವೆ. ಶಾಸನಗಳಲ್ಲಿ ಛಂದಸ್ಸಿನ ನಿಯಮಗಳು ಪಾಲಿಸಿರುವುದು ಕಂಡುಬರುತ್ತದೆ. ಆದರೆ ಶಾಸನಗಳನ್ನು ಅತಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಛಂದಸ್ಸಿನ ಪ್ರಕಾರ ಗಣವಿಭಜನೆ ಮತ್ತು ಪ್ರಾಸ ನಿಯಮಗಳಲ್ಲಿ ವ್ಯತ್ಯಾಸವಾಗಿರುವುದು ಕಂಡುಬರುತ್ತದೆ. ಇಂತಹ ಸಮಯದಲ್ಲಿ ಲಿಪಿಕಾರನ ಕೈ ತಪ್ಪಿ ತಪ್ಪು ಮಾಡಿದ ಅಥವಾ ಕವಿಯ ಪ್ರತಿಭೆಯ ಸ್ವತಂತ್ರವೋ ಎನ್ನುವುದನ್ನು ತುಂಬಾ ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ಶಾಸನಗಳನ್ನು ಶಿಲೆಯ ಮೇಲೆ ಕೊರೆಯುವುವಾಗ ತಪ್ಪು ಸಾಮಾನ್ಯವಾಗಿರುತ್ತದೆ. ಈ ಗ್ರಾಮದ ಶಾಸನಗಳಲ್ಲಿ ಕಂಡುಬರುವ ವೃತ್ತಗಳು ಅಕ್ಷರ ವೃತ್ತಗಳಾಗಿದ್ದು, ಅಕ್ಷರಗಳನ್ನೂ ಮುಖ್ಯವಾಗಿಟ್ಟುಕೊಂಡು ಗಣ ವಿಭಜನೆ ಮಾಡಲಾಗುತ್ತದೆ. ಅಕ್ಷರ ವೃತ್ತಗಳಲ್ಲೊಂದಾದ ಚಂಪಕಮಾಲೆಯ ವೃತ್ತವನ್ನು ಒಗ್ಗಿಸಿಕೊಂಡಿರುವ ಶಾಸನದ ಪಾಠವು ಈ ರೀತಿಯಾಗಿದೆ.

"ರನ್ನ ಸನ್ನಾಹಂ ಶಿವಪಾದ ಶೇಖರಂ ನೀತಿರತ್ನಾಕರಂ
ನುಡಿದಂತೆ ಗಣ್ಣಂ ಪತಿಹಿತಗರುಡ ನಾಮಾದಿ ಸಮಸ್ತ
ಪ್ರಸಸ್ತಿಹಿತ ಶ್ರೀ ಮದ್ದಣ್ಣನಾಯಕ ಸೋಮಿಮಯ್ಯಂ
ಮೋರಿಂಗೆರ್ರೈಯೂರೊಡೆಯರ್ಪ್ಪನ್ನ...... ಲೆಂಕಸಾಸಿರ್ಬ್ಬರ
ಸನ್ನಿಧಾನದಲಿ ಊ.................. ಮಾಕಿಮಯ್ಯಂರ್ "

ಈ ಮೇಲಿನ ಸಾಲುಗಳಲ್ಲಿ ಬಳಕೆಯಾಗಿರುವ ಸಾಲುಗಳು ಚಂಪಕಮಾಲೆ ವೃತ್ತವನ್ನು ಹೋಲುತ್ತಿದ್ದು, ನಿಯಮದಲ್ಲಿ ಅಲ್ಲಲ್ಲಿ ಸ್ವಲ್ಪ ಬದಲಾವಣೆಯಾಗಿದೆ. ಈ ರೀತಿಯ ವ್ಯತ್ಯಾಸ ಶಾಸನ ಬಳಸಿರುವ ಮಾಧ್ಯಮ ಅಥವಾ ಲಿಪಿಕಾರನ ಕೈ ತಪ್ಪಿನಿಂದಾಗಿರಬಹುದೆಂದು ಊಹಿಸಬಹುದು. ಈ ಕೆಳಗಿನ ಶಾಸನ ಪಾಠದಲ್ಲಿ ಮಹಾಸ್ರಗ್ಧರ ವೃತ್ತವನ್ನು ಬಳಸಿದ್ದಾರೆ.

" ಮದಿಗತಪಂಚಮಹಾಶಬ್ದ ಪಲ್ಲವಾನ್ವಯ ಶ್ರೀ ಪೃಥ್ವೀ ವಲ್ಲಭಂ ಪಲ್ಲವಕುಲಲೆಳಕನ
ಮೋಘವಾಕ್ಯಂಕಾಜೀಪುರವರೇ

ಶ್ವರಂ ವೈರಿನಾರಾಯಣಂ ದ್ರೋಹಕಾಳಾನಳಂ ಮ್ಲೂಳಿಕತ್ರಿ

ಣೇತ್ರಂ ರಾಜ ಮನೋಜಂ ಹಯವತ್ಸ

ರಾಜಂ ಚಿತ್ರವೆಡಂಗಂ ತ್ಯಾಗಚಿನ್ತಾಮಣಿರಾಜಗಜಸರ್ವಜ್ಞಂ

ಶ್ರೀ ಮತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಮೆರ್ಮಾನಡಿಗಳ್[೩೦] "

ಮೋರಿಗೆರೆಯ ಅತಿ ಹೆಚ್ಚು ಶಾಸನಗಳು ಚಂಪೂ ಶೈಲಿಯನ್ನು ಅನುಸರಿಸಿದರೂ ಸಹ ನಂತರದ ಸು.೧೨ನೆಯ ಶತಮಾನದಲ್ಲಿ ಸಾಂಸ್ಕೃತಿಕವಾಗಿ ಬದಲಾವಣೆ ಹೊಂದಿ ದೇಸಿಯ ಛಂದೋ ಪ್ರಕಾರಗಳು ಕಂಡುಬಂದರೂ, ಇವುಗಳ ಪ್ರಭಾವ ಶಾಸನಗಳ ಮೇಲೆ ಆಗಿಲ್ಲ. ಆದರೆ ಚಂಪೂ ಶೈಲಿಯ ಮಾದರಿಯನ್ನೇ ಅನುಸರಿಸಿವೆ. ಚಂಪೂವಿನಲ್ಲಿ ಬಳಕೆಯಾಗಿರುವ ಭಾಷೆಯ ಶೈಲಿ ಸಂವಹನರೂಪದ ದೃಷ್ಟಿಯಿಂದ ಶಾಸನಗಳು ಇದೇ ಶೈಲಿಯನ್ನು ಬಳಸಿಕೊಂಡಿವೆ ಎಂದು ತಿಳಿಯಬಹುದು. ಈ ಗ್ರಾಮದಲ್ಲಿ ದೊರೆಯುವ ಶಾಸನಗಳಲ್ಲಿ ಮಾತ್ರ ವೃತ್ತಗಳು ಕಂಡುಬರುತ್ತವೆ. ಈ ವೃತ್ತದಲ್ಲಿ ಮುಖ್ಯವಾಗಿ ಗಣ ವಿಭಜನೆ ಮಾಡುವಾ ಮಾತ್ರೆಗಳು ಬಹುಮುಖ್ಯ, ಇಲ್ಲಿ ಪಟ್ಪದಿಯ ಪ್ರಕಾರಗಳಲ್ಲೊಂದಾದ ಉದ್ದಂಡ ಪಟ್ಪದಿಯನ್ನು ಶಾಸನ ಪಾಠದಲ್ಲಿ ಕಾಣಬಹುದು.

" ವಾರಿಧಿಪರಿವೃತ ಧಾತ್ರೀನಾರಿಯ ವದನ

ದವೊಲೆಸೆದ ಕೋಗಳಿನಾಡೊಳ್ಮೋರಿಂಗೆರೈ ತಿಳಿಕಾಳಂ

ಕಾರ ಮನನುಕರಿಪುದೆನೆ ಜನಂ ಬಣ್ಣಿಸದೇ ಅಂತೆನಿಸಿದ

ಗ್ರಹಾರಂ ಮೋರಿಂಗೆರೆಯೊಳ್ ಶ್ರೀ ಮದುದಯಾದಿತ್ಯ

ದೇವಂಗೆ ಪರೋಕ್ಷವಿನಯವಿಪ್ರ್ಪತ್ತನಾಲ್ವರ್ಗೆಸತ್ರ[೩೧] "

ಶಾಸನ ಲಿಪಿಕಾರ ಶಾಸನ ಪಾಠವನ್ನು ರಚಿಸುವಾಗ ಅತೀ ಸೂಕ್ಷ್ಮತೆಯಿಂದ ಕಾರ್ಯನಿರ್ವಹಿಸಿದರು. ಛಂದಸ್ಸಿನ ನಿಯಮದಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಸಹ ಇಲ್ಲಿ ಛಂದಸ್ಸಿನ ಲಕ್ಷಣಗಳು ಕಂಡು ಬರುವುದು ಮುಖ್ಯವಾಗಿದೆ. ಇದರಿಂದ ಶಾಸನ ಬರಹಗಾರರು ಸ್ವತಃ ಕವಿಗಳಾಗಿದ್ದರು ಎನ್ನುವುದನ್ನು ದೃಢಪಡಿಸಿಕೊಳ್ಳಬಹುದು. ಇಲ್ಲಿ ಗಮನಿಸಿದಾಗ ಅತಿ ಹೆಚ್ಚಿನ ಶಾಸನಗಳಲ್ಲಿ ಕವಿಗಣ, ಭಾಷಾ ಸ್ವರೂಪ, ಛಂದಸ್ಸಿನ ನಿಯಮಗಳಿಗಿಂತ ಪದ್ಯ ರಚನೆಯ ಕಡೆಗೆ ಗಮನ ಹರಿಸಿದ್ದನ್ನು ತಿಳಿಯಬಹುದು.

ಒಟ್ಟಾರೆಯಾಗಿ ಮೋರಿಗೆರೆಯಲ್ಲಿ ದೊರೆಯುವ ಶಾಸನಗಳು ಪ್ರಾಚೀನ ಕಾಲದ ಗದ್ಯವು ಅಲ್ಲದ ಪದ್ಯವು ಅಲ್ಲದ ಒಂದು ವಿಶಿಷ್ಟ ರೂಪವಾದ ಚಂಪೂ ಶೈಲಿಯನ್ನು ಹೊಂದಿದ್ದು, ಈ ಶೈಲಿಯಲ್ಲಿಯೇ ಅಕ್ಷರ ಮತ್ತು ಮಾತ್ರ ವೃತ್ತಗಳು ಒಳಗೊಂಡಿದ್ದು ಅವುಗಳು ಪ್ರಾಸ, ಗಣ, ಲಕ್ಷಣಗಳನ್ನು ಒಳಗೊಂಡಿರುವುದು ಕಾಣುತ್ತೇವೆ. ಶಾಸನಗಳು ವಚನ ಚಳುವಳಿಯ ನಂತರ ಸಾಹಿತ್ಯಕವಾಗಿ ಬದಲಾವಣೆಯಾದ ದೇಶಿ ಛಂದೋಪ್ರಕಾರಗಳಾದ ರಗಳೆ, ತ್ರಿಪದಿ, ಸಾಂಗತ್ಯಗಳ ಪ್ರಭಾವಕ್ಕೊಳಗಾಗದೆ ಚಂಪೂ ಶೈಲಿಯನ್ನು ಮುಂದುವರಿಸಿಕೊಂಡು ಬಂದಿರುವುದು ಗಮನಾರ್ಹ ವಿಷಯವಾಗಿದೆ ಎಂದು ತಿಳಿಯಬಹುದು.

**ಶಾಸನ ಕವಿಗಳು**

ಶಾಸನಗಳನ್ನು ಹಾಕಿಸುವವನು ರಾಜ, ದಂಡನಾಯಕರು, ಅಥವಾ ಸ್ಥಳದ ಪ್ರಮುಖರಾದರೆ, ದಾನ ದತ್ತಿಗಳನ್ನು ತೆಗೆದು ಕೊಳ್ಳುವವರು ಸಾಮಾನ್ಯ ಜನರಾದರೆ, ಶಾಸನಗಳನ್ನು ಸಾರ್ವಜನಿಕವಾಗಿ ಓದಲು ಪ್ರಮುಖ ರುವಾರಿಗಳು ಶಾಸನ ಕವಿಗಳಾಗಿರುತ್ತಾರೆ. ಶಾಸನಗಳಲ್ಲಿ ದಾನಕೊಟ್ಟ, ದಾನ ತೆಗೆದುಕೊಂಡವರ, ಆ ಕಾಲ ಘಟ್ಟದ ರಾಜರ ಆಳ್ವಿಕೆಯ ಹೆಸರುಗಳು ಸಾಮಾನ್ಯವಾಗಿ ಅಧಿಕೃತವಾಗಿ ದಾಖಲೆಗಳಾಗಿರುತ್ತವೆ. ಆದರೆ ಶಾಸನವನ್ನು ರಚಿಸಿದ ಲಿಪಿಕಾರನದ್ದಾಗಲೀ, ಕವಿಗಳದ್ದಾಗಲೀ ಹೆಸರುಗಳು ಬರುವುದು ಬಹಳ ಕಡಿಮೆ. ಆದರೆ ಶಾಸನಗಳು ಶಾಸನ ರಚಿಸಿದ ಕವಿಗಳ ಉಲ್ಲೇಖದಿಂದ ಶಾಸನ ಕವಿಗಳ ಸಂಕ್ಷಿಪ್ತ ಚರಿತ್ರೆಯನ್ನು ತಿಳಿಯಲು ಆಕರಗಳಾಗುತ್ತವೆ.

ಮೋರಿಗೆರೆಯಲ್ಲಿ ದೊರೆತಿರುವ ಶಾಸನಗಳಲ್ಲಿ ಕವಿಗಳ ಉಲ್ಲೇಖ ಬಂದಿರುವುದು ಬಹಳ ಕಡಿಮೆ. ಮತ್ತು ಶಾಸನಗಳಲ್ಲಿ ಇವರಿಗೆ ಸಂಬಂಧಿಸಿದ ವಿಷಯಗಳು ವಿಸ್ತಾರವಾಗಿರದೆ ಕೇವಲ ಬರೆದ, ಕೆತ್ತಿದ, ರಚಿಸಿದ ಎನ್ನುವ ಉಲ್ಲೇಖಗಳು ಮಾತ್ರಸಿಗುತ್ತವೆ. ಇಲ್ಲಿ ಕವಿಯು ತನ್ನ ನಿಸ್ವಾರ್ಥ ಭಾವನೆ ಜೊತೆಗೆ ತಾನು ಮಾಡಿದ ಕಾರ್ಯಗಳಿಗೆ ಮಹತ್ವ ಕೊಟ್ಟಿರುವುದನ್ನು ಕಾಣಬಹದು. ನಾಡಿನಲ್ಲಿ ಕವಿಗಳು ಕಾವ್ಯಗಳನ್ನು ರಚಿಸುವಂತೆ ಶಾಸನಗಳನ್ನು ಸಹ ರಚಿಸಿರುವಂತೆ ಕಾಣಬಹುದು. ಆದರೆ ನಮ್ಮ ಅಧ್ಯಯನಕ್ಕೆ ಸಂಬಂಧಿಸಿದಂತೆ ಇಂತಹ ಉಲ್ಲೇಖಗಳು ಕಂಡುಬರುವುದಿಲ್ಲ. ಆದರೆ ದೊರೆತ ಶಾಸನ ಕವಿಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ.

**ವಿಷ್ಣಯ್ಯ (ಕ್ರಿ.ಶ.೧೦೪೬)**

ಉದ್ದಿಬಸವೇಶ್ವರ ದೇವಾಲಯದ ಮುಖ ಮಂಟಪದಲ್ಲಿರುವ ಕ್ರಿ.ಶ.೧೦೪೬ರ ಶಾಸನದಲ್ಲಿ "ನಾರಣಮಯ್ಯನಮಗಂವಿಷ್ಣಯ್ಯ ಬರೆದಂ ಸಾಸನಂ"ಎಂದು ಉಲ್ಲೇಖವಿದೆ[೩].

ಇದರಿಂದ ಈ ಶಾಸನವನ್ನು ಬರೆದವನು ನಾರಣಯ್ಯನಮಗ ವಿಷ್ಣಯ್ಯನೆಂದು ಸ್ಪಷ್ಟವಾಗುತ್ತದೆ. ಈ ಶಾಸನವು ಮೋರೆಂಗೆರೆಯನ್ನು ಬಲ್ಲವರಸನ ಕೈಲಿ ಪಡೆದು ನೊಳಂಬೇಶ್ವರ ದೇವರಿಗೆ ವಿದ್ಯಾಭ್ಯಾಸಕ್ಕಾಗಿ, ಪಾದಮೂಲ ಪರಿವಾರ ಮುಂತಾದವಕ್ಕೆ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು, ವಿರೂಪಾಕ್ಷದೇವರ ಸಮಕ್ಷಮದಲ್ಲಿ ದಾನ ನೀಡುತ್ತಾರೆ. ದಂಡನಾಯಕ ಸೋವಿಮಯ್ಯ ಬಾವಿಯನ್ನು ಕಟ್ಟಿಸಿ ಅದಕ್ಕೆ ಸೋಮತೀರ್ಥವೆಂದು ಹೆಸರಿಟ್ಟು, ಕೆರೆ, ಬಾವಿ, ತೋಟವನ್ನು ದಾನ ನೀಡುತ್ತಾನೆ. ಶಾಸನವು ಒಟ್ಟು ೪೪ ಸಾಲುಗಳನ್ನು ಒಳಗೊಂಡಿದೆ.

**ನಾಗಮಯ್ಯ (ಕ್ರಿ.ಶ.೧೦೪೫)**

ಮೋರಿಗೆರೆ ಉದ್ಧಿ ಬಸವಣ್ಣನ ದೇವಾಲಯದಲ್ಲಿರುವ ಶಾಸನದಲ್ಲಿ "ನಾಗಮಯ್ಯಂ ಬರೆದಂ ಸಾಸನಂ" ಎಂದು ಉಲ್ಲೇಖವಿದೆ.[೩೩] ಈ ಶಾಸನವನ್ನು ಬರೆದವನು ನಾಗಮಯ್ಯ ಎನ್ನುವುದು ಸ್ಪಷ್ಟವಾಗಿದೆ. ಶಾಸನವು ನೈಷ್ಠಿಕರಲ್ಲದೆ ತಪೋಧನರನ್ನು ಮಠದಿಂದ ನಾಡರಸರು, ಮೋರಿಂಗೆರೆಯ ೧೨ ಮಹಾಜನರು ಸೇರಿ ಓಡಿಸಬೇಕೆಂದಿದೆ. ಈ ಶಾಸನವು ೬೮ ಸಾಲುಗಳನ್ನು ಒಳಗೊಂಡಿದೆ.

**ಶಾಸನಶಿಲ್ಪ**

ಕರ್ನಾಟಕದ ಶಾಸನ ಪಾಠಗಳಲ್ಲಿ ವೈವಿಧ್ಯತೆವಿರುವಂತೆ ಕರ್ನಾಟಕದ ಶಾಸನ ಶಿಲ್ಪಗಳಲ್ಲಿಯೂ ವೈವಿದ್ಯತೆ ಇದೆ. ಬಹುಶಃ ಭರತಖಂಡದ ಬೇರೆ ಯಾವ ರಾಜ್ಯದಲ್ಲಿಯೂ ಇಂತಹ ವೈವಿಧ್ಯತೆಯನ್ನು ನಾವೂ ಕಾಣಲಾರೆವು. ಶಾಸನ ಶಿಲ್ಪವೆಂದಾಗ ಎರಡು ಅಂಶಗಳು ನಮ್ಮ ಗಮನಕ್ಕೆ ಬರುತ್ತವೆ. (೧) ಶಾಸನ ಸಹಿತವಾದ ಶಿಲ್ಪಗಳು, (೨)ಶಾಸನ ರಹಿತವಾದ ಶಿಲ್ಪಗಳು, ದಾನ ಶಾಸನಗಳಲ್ಲಿ ಕೆಲವೊಮ್ಮೆ, ಶಿಲ್ಪಗಳಿರಬಹುದು, ಇಲ್ಲದಿರಬಹುದು, ಆದರೆ ವೀರಗಲ್ಲುಗಳಲ್ಲಿ ಶಿಲ್ಪವಿದ್ದೇ ಇರುತ್ತದೆ. ಅನೇಕ ವೀರಗಲ್ಲುಗಳು ಶಾಸನ ಸಹಿತವಾಗಿದ್ದರೆ, ಕೆಲವು ವೀರಗಲ್ಲುಗಳಲ್ಲಿ ಶಾಸನವೇ ಇರುವುದಿಲ್ಲ. ಇದೇ ಮಾತನ್ನು ಮಾಸ್ತಿ ಶಿಲ್ಪಗಳಿಗೂ ಹೇಳಬಹುದು, ಶಿಲ್ಪವಿರಲಿ, ಇಲ್ಲದಿರಲಿ ಇವೆರೆಡನ್ನೂ ಶಾಸನಗಳೆಂದು ಪರಿಗಣಿಸುತ್ತಾರೆ.

ಆದ್ದರಿಂದ ಶಾಸನಗಳಲ್ಲಿ ಶಿಲ್ಪವನ್ನು ಬಿಡಿಸುವಾಗ ಯಾವ ಉದ್ದೇಶವನ್ನೂ ಹೊಂದಿರದಿದ್ದರೂ, ಮುಂದೆ ಬರುಬರುತ್ತ ಉದ್ದೇಶವನ್ನು ಹೊಂದಿಯೇ ಶಿಲ್ಪವನ್ನು ಬಿಡಿಸಿರುತ್ತಾರೆ. ದಾನ ಶಾಸನಗಳು ಹೊರ ನೋಟಕ್ಕೆ ಇಂತಹ ಮತದ ಶಾಸನಗಳೆಂದು ತಿಳಿಯಲೆಂಬ ಉದ್ದೇಶವಿದ್ದರೆ, ವೀರಗಲ್ಲುಗಳಲ್ಲಿ, ಅಕ್ಷರಗಳಲ್ಲಿ ಹೇಳಲು ಆಗದ ವಿವರಗಳನ್ನು ಶಿಲ್ಪದಲ್ಲಿ ಬಿಡಿಸಿರುತ್ತಾರೆ. ಇಲ್ಲಿಯೂ ಶಾಸನವಿರಲಿ, ಶಾಸನವಿಲ್ಲದಿರಲಿ ಹೊರನೋಟದಿಂದಲೇ ಇದನ್ನು ಇಂತಹ ಶಾಸನಗಳೆಂದು ಗುರುತಿಸುವಷ್ಟರ ಮಟ್ಟಿಗೆ ಶಿಲ್ಪಗಳು ತಟ್ಟನೆ ತಿಳಿಯುವಂತಿವೆ. ಹೀಗಾಗಿ ಶಾಸನವಿಲ್ಲದಿದ್ದರು ವೀರಗಲ್ಲಿನ ಶಿಲ್ಪವನ್ನು ನೋಡಿ

ನಡೆದಿರಬಹುದಾದ ಯುದ್ಧದ ತೀಕ್ಷ್ಣತೆಯನ್ನು ಅರ್ಥ ಮಾಡಿಕೊಳ್ಳಬಹುದಾದರೂ, ಯುದ್ಧದಲ್ಲಿ ಭಾಗವಹಿಸಿರಬಹುದಾದ ಪಕ್ಷಗಳ ಗುರುತು ಹಾಗೂ ವ್ಯಕ್ತಿಗಳ ಗುರುತು ಮಾತ್ರ ತಿಳಿಯುವುದಿಲ್ಲ. ಆದರೆ ಶಿಲ್ಪದ ಮೂಲ ಉದ್ದೇಶ ಮಾತ್ರ ತಿಳಿಯುತ್ತದೆ.

**ಶಾಸನಶಿಲ್ಪ-ಶಿಲ್ಪ**

ಶಿಲ್ಪ ಹಾಗೂ ಶಾಸನ ಶಿಲ್ಪಗಳಲ್ಲಿ ಹಲವಾರು ಹೋಲಿಕೆ ಮತ್ತು ವ್ಯತ್ಯಾಸ ಗುರುತಿಸಬಹುದು, ಎರಡು ಪ್ರಕಾರಗಳಿಗೂ ಮಾಧ್ಯಮವಾಗಿ ಶಿಲೆಯೇ ಹೆಚ್ಚಾಗಿ ಬಳಕೆಯಾಗಿದೆ. ಶಿಲ್ಪ ತಯಾರಿಕೆಯಲ್ಲಿ ಲೋಹದ ಬಳಕೆಯಿದ್ದರೂ ಕೂಡಾ ಶಾಸನ ಶಿಲ್ಪದಲ್ಲಿ ಲೋಹದ ಬಳಕೆಯಿಲ್ಲ, ಆದರೆ ತಾಮ್ರ ಶಾಸನಗಳಲ್ಲಿ ಕೆಲವು ರೇಖಾಚಿತ್ರಗಳನ್ನು ಹಾಗೂ ಪತ್ರಗಳನ್ನು ಕೂಡಿಸಲು ರಾಜ ಮುದ್ರೆಯ ಬಳೆಗಳನ್ನು ಉಪಯೋಗಿಸಿದ್ದಾರೆ. ಮಾಧ್ಯಮವು ಒಂದೇ ಆದರೂ ಶಿಲ್ಪ ಹಾಗೂ ಶಾಸನ ಶಿಲ್ಪಗಳನ್ನೂ ನಿರ್ಮಿಸಿವು ತಂತ್ರಗಳು ಬೇರೆ ಬೇರೆಯಾಗುತ್ತವೆ. ಶಿಲ್ಪವನ್ನು ನಾಲ್ಕು ಕಡೆ ಕೆತ್ತಬೇಕು, ಆದರೆ ಶಾಸನ ಶಿಲ್ಪವನ್ನು ಮುಂಭಾಗ ಕಾಣುವಂತೆ ಕೆತ್ತಿದರೆ ಸಾಕು. ಅಂದರೆ ಎದುರು ನಿಂತು ನೋಡಿದಾಗ ಕಾಣುವಂತೆ ನಿರ್ಮಿಸಬೇಕು. ಶಿಲ್ಪದಲ್ಲಿ ಒಂದು ಆಕೃತಿಯನ್ನು ಮಾತ್ರ ನಿರೂಪಿಸಲಾಗಿರುತ್ತದೆ. ಶಾಸನ ಶಿಲ್ಪದಲ್ಲಿ ಒಂದು ಘಟನೆಗೆ ಸಂಬಂಧಿಸಿದ ಎಲ್ಲ ವ್ಯಕ್ತಿಗಳನ್ನು ಶಿಲ್ಪಿಯೂ ನಿರೂಪಿಸಲು ಪ್ರಯತ್ನಿಸುತ್ತಾನೆ. ಶಿಲ್ಪದಲ್ಲಿ ಒಂದು ಘಟನೆಯನ್ನು ಒಂದು ಭಂಗಿಯನ್ನು ಕೆತ್ತಿದರೆ, ಶಾಸನ ಶಿಲ್ಪದಲ್ಲಿ ಏಕಕಾಲದಲ್ಲಿ ಹಲವಾರು ಘಟನೆಗಳನ್ನು ಚಿತ್ರಿಸಬಹುದು. ವೀರಗಲ್ಲು ಹಾಗೂ ಮಾಸ್ತಿಗಲ್ಲಿನ ಶಿಲ್ಪಗಳಲ್ಲಿ ಈ ತಂತ್ರವನ್ನು ಪ್ರಧಾನವಾಗಿ ಕಾಣಬಹುದು.[೩೪]

ಭಾರತೀಯ ಶಿಲ್ಪವು ಧಾರ್ಮಿಕ ಪ್ರೇರಣೆ ಮತ್ತು ಪ್ರಭಾವಗಳಿಂದ ಮೂಡಿ ಬಂದದ್ದಾಗಿದೆ, ಅದಕ್ಕೆ ಮಡಿ-ಮೈಲಿಗೆಗಳು ಹೆಚ್ಚು. ಶಾಸನ ಶಿಲ್ಪಗಳಾದರೋ ಸಾಮಾನ್ಯ ಜನರ ಸ್ವತ್ತು, ಜನರ ಬದುಕಿನೊಂದಿಗೆ ಉಳಿದು ಬೆಳೆದಿರುತ್ತದೆ. ಹೀಗಾಗಿ ಜನಾಂಗದಿಂದ ಜನಾಂಗಕ್ಕೆ ಇದನ್ನು ನೋಡುವ ವಿಧಾನ ಬೇರೆ ಬೇರೆಯಾಗಿರುತ್ತದೆ. ಕೆಲವು ವೇಳೆ ಅದು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಕಷ್ಟಪಡಬೇಕಾಗುತ್ತದೆ. ಈ ಕಾರಣಗಳಿಂದ ಶಾಸನ ಶಿಲ್ಪಗಳನ್ನು ರಸ್ತೆಬದಿಯಲ್ಲಿ ಮರಗಳ ಕೆಳಗೆ ಎಲ್ಲೆಂದರಲ್ಲಿ ಕಾಣಬಹುದು. ಇದಕ್ಕೆ ತದ್ವಿರುದ್ಧವಾಗಿ ಅನೇಕ ಕಡೆ ಭಕ್ತಿಯಿಂದ ಪೂಜೆಗೊಳ್ಳುತ್ತಿರುವ ಶಾಸನ ಶಿಲ್ಪಗಳನ್ನು ಕಾಣಬಹುದು. ಶಿಲ್ಪ ಮೂಲತಃ ಕಲೆಯ ಮನಸ್ಸಿನಿಂದ ಹುಟ್ಟಿ, ಧಾರ್ಮಿಕ ಚೌಕಟ್ಟಿನಲ್ಲಿ ಬೆಳೆದಿದೆ, ಅದು ಹೆಚ್ಚಾಗಿ ಭಕ್ತಿಯನ್ನು ಹೆಚ್ಚಿಸುತ್ತದೆ. ಶಾಸನ ಶಿಲ್ಪವು ಸಾಮಾಜಿಕ ಕಳಕಳಯಿಂದ ಹುಟ್ಟಿದಂಥದ್ದು, ಇದು ಮೊದಲಿಗೆ ಸಾಂಸ್ಕೃತಿಕ ಆಕಾರವಾಗಿದ್ದು, ನಂತರ ಕಲಾಮಾಧ್ಯಮವಾಗಿದೆ.[೩೫]

ಶಾಸನ ಶಿಲ್ಪ ತಯಾರಿಕೆಯ ಕಾಲದಲ್ಲಿ ಶಿಲ್ಪಿಗೆ ನೆರವಾಗುವ ಅಂಶಗಳಾವುವೆಂದರೆ, ನಡೆದ ಘಟನೆಯ ವಿವರ ಮತ್ತು ಶಿಲಾಪಲಕದಲ್ಲಿ ದೊರೆಯುವ ಸ್ಥಳದ ಅವಕಾಶ,

ಸ್ಥಳದ ಅವಕಾಶ, ಸ್ಥಳವು ಕಡಿಮೆಯಾಗಿದ್ದು ಘಟನೆ ವಿಸ್ತಾರವಾಗಿದ್ದರೆ, ಶಿಲ್ಪಿಗೆ ಬಹಳ ಕಷ್ಟವಾಗುತ್ತದೆ. ವಿಷಯಕ್ಕೆ ಸಾಕಾಗುವಷ್ಟು ಉದ್ದ, ಅಗಲ ಮತ್ತು ಗಾತ್ರದ ಶಿಲೆಯನ್ನು ಸಿದ್ಧತೆಮಾಡಿಕೊಳ್ಳಬೇಕು. ಈ ಕಾರಣದಿಂದಲೇ ಒಂದು ಹಂತದಿಂದ ಏಳು ಹಂತದವರೆಗಿನ ಶಾಸನ ಶಿಲ್ಪಗಳನ್ನು ಕಾಣಬಹುದಾಗಿದೆ. ಇಲ್ಲಿ ಘಟನೆಯುನ್ನು ಆರಂಭದಿಂದ ಕೊನೆಯವರೆಗೂ ಹಂತ ಹಂತವಾಗಿ ನಿರೂಪಿಸಲಾಗುತ್ತದೆ. ನಮ್ಮ ನಾಡಿನ ಶಿಲ್ಪಗಳು ಬಹುತೇಕವಾಗಿ ಪೂಜಾ ಮೂರ್ತಿಗಳೇ ಆಗಿವೆ. ಆದರೆ ಶಾಸನ-ಶಿಲ್ಪಗಳು ಹುಟ್ಟಿದ್ದು, ಯಾವುದಾದರೂ ಘಟನೆಯ ವಿವರವನ್ನು ತಿಳಿಸಲು, ಅದು ಜನರ ರೀತಿ-ನೀತಿಗಳನ್ನು ತಿಳಿಸಿ ಕೊಡುತ್ತದೆ. ಈ ಕಾರಣದಿಂದಾಗಿ ಹಲವಾರು ಜನಪದೀಯ ನಂಬಿಕೆಗಳು ಆಚರಣೆಗಳು ಸಂಕೇತಗಳ ಮುಖಾಂತರ ಶಾಸನ ಶಿಲ್ಪಗಳಲ್ಲಿ ಸ್ಥಾನ ಪಡೆಯತೊಡಗಿತು. ಮಹಾ ಸತಿ ಶಿಲ್ಪಗಳಲ್ಲಿ ಸತಿಯು ತನ್ನ ಕೈಯನ್ನು ಮೇಲೆತ್ತಿ ಹರಸುತ್ತಿರುವುದು, ನಿಷಿದಿ, ಕಲ್ಲುಗಳಲ್ಲಿ ಸಾಧಕರು ಪುಸ್ತಕದ ಮುಂದೆ ಕುಳಿತಿರುವುದು, ವೀರನ ಭುಜದ ಮೆಲೆ ಗಿಳಿ ಕುಳಿತಿರುವುದು, ದಾನ ಶಾಸನಗಳಲ್ಲಿ ಸೂರ್ಯ-ಚಂದ್ರ ಮತ್ತು ಆಕಳು ಕರು ಇನ್ನೂ ಮುಂತಾದ ಚಿತ್ರಣಗಳಲ್ಲಿ ಸಂಕೇತಗಳನ್ನು ಕಾಣಬಹುದು.[೩೬]

ಶಿಲ್ಪ ಮತ್ತು ಶಾಸನ ಶಿಲ್ಪಕ್ಕೆ ಮಾಧ್ಯಮ ಒಂದೇ ಆದರೂ 'ಪ್ರೇರಣೆ' ಬೇರೆ ಬೇರೆಯಾಗಿದೆ. ಶಿಲ್ಪಕ್ಕೆ ಪುರಾಣಗಳಿಂದ, ಕಾವ್ಯಗಳಿಂದ ವಸ್ತು ದೊರಕಿದರೆ ಶಾಸನ ಶಿಲ್ಪಕ್ಕೆ ಜನರ ಬದುಕೇ ಪ್ರೇರಣೆಯಾಗಿದ್ದು, ಅದೇ ಮೂಲವಸ್ತುವಾಗಿ ರೂಪಗೊಂಡಿದೆ, ಶಿಲ್ಪಕೃತಿಗಳಲ್ಲಿ ಕಲೆಗಾರಿಕೆ, ಸೌಂದರ್ಯ ಮೂಲವಸ್ತುವಾಗಿ ರೂಪಗೊಂಡಿದೆ, ಶಿಲ್ಪಕೃತಿಗಳಲ್ಲಿ ಕಲೆಗಾರಿಕೆ, ಸೌಂದರ್ಯ ಕಂಡುಬಂದರೆ ಶಾಸನಶಿಲ್ಪದಲ್ಲಿ ಸಾಮಾಜಿಕ ಕಳಕಳಿಯೇ ಮುಖ್ಯವಾಗಿ ಕಂಡುಬರುತ್ತದೆ. ಶಿಲ್ಪಶಾಸ್ತ್ರವು ಒಂದು ರೀತಿಯಲ್ಲಿ ನಿಯಂತ್ರಿತವಾದ ಕಲೆಯಾಗಿದೆ, ಆದರೆ ಶಾಸನಶಿಲ್ಪದಲ್ಲಿ ಶಿಲ್ಪಿಗೆ ಯಾವುದೇ ಶಾಸ್ತ್ರೀಯವಾದ ನಿಯಂತ್ರಣವಿಲ್ಲ. ನಿಯಂತ್ರಣವಿದ್ದರೆ ಅದು ಸ್ಥಳವಕಾಶ ಮಾತ್ರ, ಹೀಗಾಗಿ ಒಂದೊಂದು ಶಾಸನಶಿಲ್ಪವೂ ಕೂಡಾ ವೈಶಿಷ್ಟ್ಯತೆ ಮತ್ತು ಸ್ವಂತಿಕೆಯಿಂದ ಕೂಡಿದೆ.[೩೭]

ನಮ್ಮ ನಾಡಿನ ಜನಜೀವನವನ್ನರಿಯಬೇಕಾದರೆ ಶಾಸನಗಳಿಗಿಂತ ಉತ್ತಮ ಸಾಧನಗಳಿಲ್ಲ[೩೮] ಎಂಬುದು ಡಾ.ಎಂ.ಚಿದಾನಂದ ಮೂರ್ತಿಯವರ ಅಭಿಪ್ರಾಯವಾಗಿದೆ. ಶಾಸನಗಳಂತೆ ಶಿಲ್ಪಗಳು ಕೂಡಾ ತಕ್ಕಮಟ್ಟಿಗೆ ಆಯಾ ಕಾಲದ ಆಚರಣೆಗಳನ್ನು, ವೇಷ-ಭೂಷಣಗಳನ್ನು ತಿಳಿಯಲು ನೆರವಾಗುತ್ತವೆ. ಒಟ್ಟಾರೆ ಶಾಸನಶಿಲ್ಪಗಳು ಲಿಪಿಯನ್ನು ಓದಲಾಗದವರಿಗೂ ಶಾಸನ ಲಿಖಿಸದ ಆಂತರ್ಯಗಳ ಸಹಿತ ಸೂಕ್ಷ್ಮಗ್ರಹಿಕೆಗೆ ತಮ್ಮ ಕಾಲದ ಸಾಂಸ್ಕೃತಿಕ ಬದುಕಿನ ಚಹರೆಗಳನ್ನು ಸಾಧ್ಯವಿದ್ದಷ್ಟು ಅಧಿಕೃತವಾಗಿ ಹೇಳುವ, ಧ್ವನಿಸುವ, ಮನನ ಮಾಡಿಸುವ ದಾಖಲೆಗಳಾಗಿದೆ. ಆದರೆ ಶಾಸನ ಶಿಲ್ಪಗಳು ಆಯಾ ಕಾಲಗಳಲ್ಲಿ ಆಯಾ ಪ್ರದೇಶಗಳಲ್ಲಿ ಬೇರೆ ಬೇರೆ ರೀತಿಯಾಗಿ ಬೆಳೆದು ಬಂದ ಕಲೆಯಾಗಿದೆ.

ಮಡಿವಂತಿಕೆಯನ್ನು ದೂರವಿಟ್ಟು, ಎಲ್ಲಾ ವರ್ಗದವರನ್ನೂ ತನ್ನ ವ್ಯಾಪ್ತಿಗೆ ಸೇರಿಸಿಕೊಂಡ ವಿಶಿಷ್ಟ ಪ್ರಕಾರವಾಗಿ ಬೆಳೆಯಿತು. ಗ್ರಾಮಗಳನ್ನು ಅಬಲೆಯರನ್ನು ಮತ್ತು ದನಕರುಗಳನ್ನು ರಕ್ಷಿಸಲು ಪ್ರಾಣತೆತ್ತವರನ್ನು ವಿದ್ಯಾ ಅಭಿವೃದ್ಧಿಗೆ ದಾನ ನೀಡಿದವರನ್ನು ಹೀಗೆ ಇನ್ನೂ ಮುಂತಾಗಿ ಸಾಮಾನ್ಯ ಕಾರ್ಯಗಳನ್ನು ಮಾಡಿದವರನ್ನು ಹೀಗೆ ಶಾಸನಶಿಲ್ಪದಲ್ಲಿ ಕಾಣಬಹುದಾಗಿದೆ. ಒಬ್ಬನ ಮೇಲಿದ್ದ ಪ್ರೀತಿ ಅಭಿಮಾನಗಳನ್ನು ಜನಸಮುದಾಯ ಶಾಸನಶಿಲ್ಪ ಜನಸಮುದಾಯ ಶಾಸನಶಿಲ್ಪದ ಮುಖಾಂತರ ವ್ಯಕ್ತಪಡಿಸಿರುವುದನ್ನು ನಾವು ಗುರುತಿಸಬಹುದು.[೩೯]

## ಶಾಸನ ಶಿಲ್ಪದ ಬೆಳವಣಿಗೆ

ಶಾಸನಶಿಲ್ಪದ ಬೆಳವಣಿಗೆಗೆ ಸುಮಾರು ಒಂದೂವರೆ ಸಹಸ್ರವರ್ಷಗಳ ಇತಿಹಾಸವಿದೆ. ಇಷ್ಟು ದೀರ್ಘಾವಧಿಯಲ್ಲಿ ಶಾಸನಶಿಲ್ಪವು ಅನೇಕ ಹಂತಗಳನ್ನು ಪಡೆದು, ಧರ್ಮ ರಾಜಕೀಯ, ಮತ್ತು ಸಾಂಸ್ಕೃತಿಕವಾಗಿ ಬೆಳೆದಿದೆ. ಶಾಸನಶಿಲ್ಪದ ಬೆಳವಣಿಗೆಯನ್ನು ಗುರುತಿಸುವಲ್ಲಿ ದಾನ ಶಾಸನಗಳಿಗಿಂತಲೂ ಸ್ಮಾರಕ ಶಾಸನಗಳು ಹೆಚ್ಚು ಸಹಾಯಕವಾಗುತ್ತವೆ. ಕನ್ನಡ ಶಾಸನಶಿಲ್ಪದ ಬೆಳವಣಿಗೆಯನ್ನು ಕನ್ನಡದ ಮೊಟ್ಟಮೊದಲ ಶಾಸನವಾದ ಹಲ್ಮಿಡಿ ಶಾಸನವು ಕದಂಬರ ಕಾಲಕ್ಕೆ ಸೇರಿದ್ದರು, ಇವರ ಕಾಲದ ಶಾಸನಶಿಲ್ಪದ ಬೆಳವಣಿಗೆಯನ್ನು ಸೂಕ್ಷವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ, ಕಾರಣ ಇವರ ಕಾಲದ ಉತ್ತರ ಕನ್ನಡ ಜಿಲ್ಲೆ, ತಾಳಗುಂದದ ಶಾಸನ, ಗುಡ್ನಾಪುರದ ಶಾಸನ, ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ ಶಾಸನ ಮೊದಲಾದವು ಯಾವರೀತಿಯ ಶಿಲ್ಪವನ್ನು ಹೊಂದಿಲ್ಲ, ಈ ರೀತಿಯ ಶಾಸನಗಳಿಗೆ ಚಾಲನೆ ನೀಡಿದ್ದು, ಶಾತವಾಹನರ ಶಾಸನಗಳು, ಶಾತವಾಹನರ ಕಾಲದ ಸವಸಿರಿಪುಳುಮಾದಿ ಶಾಸನ, ಬನವಾಸಿಯ ಕ್ರಿ.ಶ.೩ನೇ ಶತಮಾನದ ನಾಗಶಿಲಾಶಾಸನ, ಗುಲ್ಬರ್ಗಾ ಜಿಲ್ಲೆಯ ಬೆಳವಾಡಿಗೆ ಗ್ರಾಮದ ಕಲಕನ ಶಾಸನ, ಅದೇ ಜಿಲ್ಲೆಯ ಸನ್ನತಿ ಶಾಸನಗಳು ಕದಂಬರ ಶಾಸನಗಳಿಗೆ ಸ್ಪೂರ್ತಿ ನೀಡಿದವು. ಶಾತವಾಹನರ ಕಾಲದಲ್ಲಿ ಅರಳಲು ಪ್ರಾರಂಭಿಸಿದ ಶಾಸನ ಕಲೆಯು ಕದಂಬರ ಕಾಲದಲ್ಲಿ ಅಷ್ಟಾಗಿ ಬೆಳೆಯಲಿಲ್ಲ. ಇದಕ್ಕೆ ಎರಡು ಕಾರಣಗಳನ್ನು ಗುರುತಿಸಬಹುದು. ಒಂದನೆಯದು ಕದಂಬರ ಕಾಲದಲ್ಲಿ ಶಾಸನ ನೆಡುವ ಕ್ರಿಯೆ ಇನ್ನೂ ಸಾರ್ವತ್ರಿಕ ರೂಪ ಪಡೆಯದೇ ಇದ್ದದ್ದು, ಅರಮನೆಯಿಂದ ಪ್ರಕಟಗೊಂಡು ನಿರ್ಮಾಣವಾದ ಶಾಸನಗಳಲ್ಲಿ ವಿಷಯವನ್ನು ಹೇಳುವುದೇ ಮುಖ್ಯವಾಯಿತು. ಎರಡನೆಯದಾಗಿ ಶಾಸನಗಳು ಕಲೆಯ ಮಾಧ್ಯಮವಾಗಬಲ್ಲವು ಎಂಬ ಅರಿವು ಇನ್ನೂ ಅವರಿಗೆ ಹೊಳೆಯದೇ ಇದ್ದದ್ದು ಮತ್ತು ಶಾಸನ ವ್ಯಾಪ್ತಿಯ ಪರಿಜ್ಞಾನ ಅವರಿಗೆ ಹೊಳೆದೇ ಇರುವುದು.[೪೦] ಈ ಎರಡು ಪ್ರಮುಖ ಕಾರಣಗಳಿಂದ ಕದಂಬರ ಕಾಲದಲ್ಲಿ ಶಾಸನ ಶಿಲ್ಪ ಬೆಳವಣಿಗೆಯಾಗದೆ ಇರುವುದಕ್ಕೆ ಕಾರಣವಾಗಿದೆ.

ಬಾದಾಮಿ ಚಾಲುಕ್ಯರು ವಾಸ್ತು ಶಿಲ್ಪದಲ್ಲಿ ಪ್ರಯೋಗಗಳನ್ನು ನಡೆಸಿ ಯಶಸ್ವಿಯಾಗದಂತೆ ಶಾಸನಶಿಲ್ಪಗಳಲ್ಲಿ ಯಶಸ್ವಿಯಾಗಲಿಲ್ಲ. ಅಲ್ಲದೆ ಇವರ ಕಾಲದ

ಶಾಸನಗಳು ಹೆಚ್ಚಾಗಿ ದೇವಾಯಲಯದ ಗೋಡೆಗಳ ಮೇಲೆ ಹಾಗೂ ಕಂಬಗಳ ಮೇಲೆ ಪ್ರಕಟಿತಗೊಂಡಿವೆ. ಆದ್ದರಿಂದ ಅಂಥಸ್ಥಳಗಳಲ್ಲಿ ತಮ್ಮ ಕೈಚಳಕವನ್ನು ತೋರಲಿಲ್ಲವೆಂದು ಊಹಿಸಬಹುದು. ಬೆಳಗಲಿ ಗ್ರಾಮದ ಕೀರ್ತವರ್ಮನ ಶಾಸನ, ಬನ್ನಿಕೊಪ್ಪ ಗ್ರಾಮದ ವಿಜಯಾದಿತ್ಯನ ಶಾಸನ, ಲಕ್ಷ್ಮೇಶ್ವರದ ಶಂಖ ಬಸದಿಯ ಎಡ ಹಾಗೂ ಬಲಗೋಡೆಗಳ ಮೇಲಿರುವ ಎರಡನೆಯ ಪುಲಕೇಶಿ, ವಿನಯಾದಿತ್ಯ, ವಿಕ್ರಮಾದಿತ್ಯರ ಶಾಸನಗಳು, ದೇವಗಿರಿಯ ಕೆರೆಯದಂಡೆಯ ಮೇಲಿರುವ ಎರಡನೆಯ ವಿಕ್ರಮಾದಿತ್ಯರ ಶಾಸನ ಮೊದಲಾದವು ಶಿಲ್ಪರಹಿತ ಶಾಸನಗಳಾಗಿವೆ. ಬಾದಾಮಿ ಚಾಲುಕ್ಯರ ಕಾಲದ ಸ್ಮಾರಕ ಶಿಲೆಗಳು ಸಹ ಶೈಲಿಯ ದೃಷ್ಟಿಯಿಂದ ಸಪ್ಪೆಯಾಗುತ್ತದೆ. ಸಿಡೆನೂರ ಗ್ರಾಮದ ವೀರಗಲ್ಲು, ಬೆನಕನಗೊಂಡ ಗ್ರಾಮದ ವೀರಗಲ್ಲು, ಪಟ್ಟದಕಲ್ಲಿನ ವೀರಗಲ್ಲುಗಳು ಎರಡು ಮೂರು ಹಂತಗಳಲ್ಲಿ ಶಿಲ್ಪಿಸಲ್ಪಟ್ಟಿವೆ. ಪಟ್ಟದಕಲ್ಲಿನ ಒಂದು ವೀರಗಲ್ಲಿನಲ್ಲಿ ವೀರನು ಅಪ್ಸರೆಯರೊಡನೆ ಸ್ವರ್ಗಕ್ಕೆ ಹಾರುತ್ತಿರುವ ಶೈಲಿಯ ಶಿಲ್ಪ ಬಾದಾಮಿಯಲ್ಲಿರುವ ಗುಹೆಗಳ ಭಿತ್ತಿ ಚಿತ್ರಗಳಲ್ಲಿ ಕಂಡು ಬರುತ್ತವೆ. ಈ ವೀರಗಲ್ಲುಗಳು ತಲೆಗೆ ಸುಂದರವಾದ ಕಿರೀಟವನ್ನು ಧರಿಸಿಕೊಂಡಿದೆ. ಇವರ ಕಾಲದ ಬಹುತೇಕ ವೀರಗಲ್ಲು ಹೆಚ್ಚು ಸವೆದಿರುವುದರಿಂದ ಶಿಲ್ಪದ ವಿವರಗಳು ಸ್ಪಷ್ಟವಾಗಿ ಕಾಣುವುದಿಲ್ಲ.[೮೧]

ರಾಷ್ಟ್ರಕೂಟರ ಕಾಲದ ಅವಧಿಯ ಶಾಸನ ಶಿಲ್ಪ ಆಶ್ಚರ್ಯಕರ ರೀತಿಯಲ್ಲಿ ಬೆಳವಣಿಗೆಯನ್ನು ಪಡೆದು, ವಿನ್ಯಾಸದಲ್ಲಿ ಹೊಸತನವನ್ನು ಪಡೆಯಿತು. ಉದಾಹರಣೆಗೆ ಬೆಟಗೇರಿಯ ವೀರಗಲ್ಲುಗಳನ್ನು ವೀಕ್ಷಿಸಬಹುದು, ಇಲ್ಲಿನ ಹೆಚ್ಚು ವೀರಗಲ್ಲುಗಳ ಮೇಲ್ಭಾಗ ದೇವಾಲಯಗಳ ಗೋಪುರದ ಮೇಲ್ಭಾಗದಂತಿದೆ, ವೀರಗಲ್ಲಿನ ಅರ್ಧಭಾಗ ವೀರನ ಹೋರಾಟ ಹಾಗೂ ಅಪ್ಸರೆಯರ ಚಿತ್ರಣಕ್ಕೂ ಉಳಿದ ಅರ್ಧಭಾಗವನ್ನು ವೀರನು ಸ್ವರ್ಗದಲ್ಲಿ ಕುಳಿತಿರುವ ಚಿತ್ರಣ ಮತ್ತು ಗೋಪುರದ ಚಿತ್ರಕ್ಕೂ, ಬಳಕೆಯಾಗಿದೆ. ವೀರನು ಸ್ವರ್ಗದಲ್ಲಿ ಅಪ್ಸರೆಯರ ಸೇವೆಯನ್ನು ಸ್ವೀಕರಿಸುತ್ತ ಎತ್ತರವಾದ ವೇದಿಕೆಯಮೇಲೆ ಕೈಯಲ್ಲಿ ಕಮಲದ ಮೊಗ್ಗನ್ನು ಹಿಡಿದುಕೊಂಡು ಹೋಗುವ ಹಂತದಲ್ಲಿ ಆಕಾಶದಲ್ಲಿ ಮೋಡಗಳ ನಡುವೆ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಈ ರೀತಿಯ ಚಿತ್ರಣ ಬಾದಾಮಿಯ ಒಂದನೆ ಗುಹೆಯ ಮೇಲ್ಛಾವಣೆಯಲ್ಲಿ ಕಾಣಬಹುದು. ಇಲ್ಲಿ ಗಂಧರ್ವದಂಪತಿಗಳು ಮೋಡದ ನಡುವೆ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಈ ಚಿತ್ರಣದ ಪ್ರಭಾವವನ್ನು ರಾಷ್ಟ್ರಕೂಟರ ವೀರಗಲ್ಲುಗಳಲ್ಲಿ ಕಾಣುತ್ತೇವೆ. ರಾಷ್ಟ್ರಕೂಟರ ಕಾಲದ ಸ್ಮಾರಕ ಶಾಸನಗಳ ಮತ್ತೊಂದು ಐದರಿಂದ-ಎಂಟು ಅಡಿ ಎತ್ತರದವರೆಗೂ, ಮೂರರಿಂದ ಆರು ಅಡಿ ಅಗಲವಾಗಿಯೂ ಮತ್ತು ಒಂದುವರೆ ಅಡಿ ದಪ್ಪವಾಗಿಯೂ ಇದೆ. ಬೃಹದಾಕಾರವಾಗಿದ್ದರೂ ಕೂಡಾ ಇಲ್ಲದ ವಿವರಗಳನ್ನು ಅವು ವ್ಯಕ್ತಪಡಿಸುವ ಭಾವನೆಗಳನ್ನು ಶಿಲ್ಪಗಳು ಸಮರ್ಥವಾಗಿ ಕಂಡರಿಸಿದ್ದಾರೆ. ಹೋರಾಟದ ಹಂತದಲ್ಲಿ ವೀರನ ಹಾಗೂ ಎದುರಾಳಿಯ ಜೊತೆಯ

ಯೋಧರ ಸಂಖ್ಯೆ ಹೆಚ್ಚಾಗಿರುತ್ತದೆ. ಅಪ್ಸರೆಯರ ಹಾಗೂ ವಾದ್ಯಕಾರರ ಸಂಖ್ಯೆಯು ಹೆಚ್ಚಾಗಿರುತ್ತದೆ. ಅಪ್ಸರೆಯರ ಹೆಗಲ ಮೇಲೆ ಎರಡೂ ಕೈಗಳನ್ನು ಹಾಕಿಕೊಂಡು ವೀರನು ಮೋಡಗಳ ನಡುವೆ ಸ್ವರ್ಗಕ್ಕೆ ಹಾರುತ್ತಿರುವ ಚಿತ್ರಣ, ಮುಂದಿನ ಅವಧಿಯ ಶಾಸನಗಳಲ್ಲಿ ತಮ್ಮ ಅರಸೊತ್ತಿಗೆಯ ಲಾಂಛನವಾದ ನೇಗಿಲನ್ನು ಚಿತ್ರಿಸಿರುವುದು ಕಂಡುಬರುತ್ತದೆ. ಮಾವಲಿ, ಸಂಗೂರು, ಮೊದಲಾದ ಗ್ರಾಮದ ಶಾಸನಗಳಲ್ಲಿ ನೇಗಿಲಿನ ಚಿತ್ರಣವಿದೆ.[೪೨] ಹೀಗೆ ರಾಷ್ಟ್ರಕೂಟರ ಕಾಲದ ಶಾಸನ ಶಿಲ್ಪವು ಹಲವು ವೈಶಿಷ್ಟ್ಯಗಳಿಂದ ಕೂಡಿ ಒಂದು ನಿರ್ದಿಷ್ಟ ರೂಪವನ್ನು ಪಡೆಯಲು ಪ್ರಯತ್ನಿಸಿತು.

ಇದೇ ಅವಧಿಯಲ್ಲಿ ಕೋಲಾರ, ಬೆಂಗಳೂರು ಮತ್ತು ತುಮಕೂರು ಪ್ರದೇಶದ ಪರಿಸರದಲ್ಲಿ ದೊರೆಯುವ ಗಂಗರ ಶಾಸನಗಳು ಶಾಸನಶಿಲ್ಪ ಬೆಳವಣಿಗೆಯ ಮೊದಲ ಹೆಜ್ಜೆಗಳಾಗಿವೆಂದು ಹೇಳಬಹುದು. ಕ್ರಿ.ಶ.೯ ಮತ್ತು ೧೦ನೇ ಶತಮಾನದಲ್ಲಿ ದೊರೆಯುವ ರಾಷ್ಟ್ರಕೂಟರ ಶಾಸನಶಿಲ್ಪ ಮುಂದುವರಿದ ಶೈಲಿಯಾಗಿದ್ದು ಕಂಡು ಬರುತ್ತದೆ. ಆದರೆ ಗಂಗರ ಕಾಲದ ಸ್ಮಾರಕಗಳ ಚಿತ್ರಣದಲ್ಲಿ ಒಂದು ನಿಶ್ಚಿತ ಕ್ರಮವಿಲ್ಲ. ಆದರೆ ಅವರು ಬಳಸಿರುವ ಶಿಲೆ, ಬರಡು ಹಾಗೂ ಆಕಾರದಲ್ಲಿ ಒಂದು ನಿಯಮವಿಲ್ಲ. ವೀರನನ್ನು ದೊಡ್ಡ ಪ್ರಮಾಣದಲ್ಲಿ ಚಿತ್ರಿಸಿ, ಉಳಿದ ವಿವರಗಳನ್ನು ಯಾವುದಾದರೊಂದು ಮೂಲೆಯಲ್ಲಿ ಚಿಕ್ಕದಾಗಿ ಚಿತ್ರಿಸಿರುತ್ತಾರೆ. ವೀರನ ಕೈಯಲ್ಲಿ ಬಿಲ್ಲು ಅಥವಾ ಬಾಕುವನ್ನು ಚಿತ್ರಿಸಿರುತ್ತಾರೆ. ತಲೆಯ ಕೂದಲನ್ನು ನೆತ್ತಿಯ ಮೇಲೆ ದುಂಡಾಗಿ ಗಂಟು ಹಾಕಿದ್ದು, ಆ ಗಂಟನ್ನು ಬಟ್ಟೆಯ ಪಟ್ಟಿಯಿಂದ ಬಿಗಿದುಕೊಂಡಿರುವಂತೆ ಕಾಣುತ್ತದೆ. ಆದರೆ ಇವರ ಕೆಲವು ವೀರಗಲ್ಲುಗಳು ಬಹಳ ನಾಜೂಕಾದ ವಿವರಗಳನ್ನು ಸೂಕ್ಷ್ಮವಾಗಿ ಒಳಗೊಂಡಿದೆ. ಈ ರೀತಿಯ ಚಿತ್ರಣ ಮುಂದಿನ ಬೇರೆಯಾವ ಶಿಲ್ಪದಲ್ಲಿ ಕಂಡುಬರುವುದಿಲ್ಲ. ಆದರೆ ಇಲ್ಲಿನ ಶಿಲ್ಪಗಳು ನಯಗಾರಿಕೆಯಲ್ಲಿ ಹಿಂದೆ ನಿಲ್ಲುತ್ತವೆ. ಈ ವೀರಗಲ್ಲುಗಳಲ್ಲಿ ಹೆಚ್ಚು ವಿವರಗಳನ್ನು ನೀಡಲು ಪ್ರಯತ್ನಿಸಿದ್ದಾರೆಯೇ ಹೊರತು ಸೂತ್ರಬದ್ಧವಾಗಿ, ಪ್ರಮಾಣಬದ್ಧವಾಗಿ ವಿವರಗಳನ್ನು ನೀಡಿಲ್ಲ. ಈ ಕಾಲದ ದಾನಶಾಸನಗಳು ಹೆಚ್ಚಾಗಿ ಆಯಾ ದೇವಾಲಯಗಳ ಗೋಡೆಗಳಲ್ಲೇ ಇರುವುದರಿಂದ ಇವುಗಳ ಬಗೆಗೆ ಹೆಚ್ಚೇನೂ ಹೇಳಲಾಗುವುದಿಲ್ಲ.[೪೩]

ಕಲ್ಯಾಣ ಚಾಲುಕ್ಯರ ಹಾಗೂ ಕಲಚೂರಿಗಳ ಕಾಲದ ಶಾಸನ ಶಿಲ್ಪಗಳು ಬಹತೇಕವಾಗಿ ಒಂದೇ ರೀತಿಯಲ್ಲಿರುತ್ತದೆ. ಈ ಅವಧಿಯಲ್ಲಿ ಶಾಸನ ನಡೆಸುವ ಪದ್ಧತಿ ಸರ್ವವ್ಯಾಪಿಯಾಯಿತು. ರಾಜರು ಮತ್ತು ಪ್ರಮುಖರು ಮಾತ್ರವೇ ಶಾಸನ ನೆಡಿಸಬೇಕೆಂಬ ಪದ್ಧತಿ ಬದಲಾಗಿ, ಜನಸಾಮಾನ್ಯರು ಶಾಸನ ಹಾಕಿಸುವುದಕ್ಕೆ ಮುಂದಾದರು, ಹೀಗಾಗಿ ಸಹಜವಾಗಿಯೇ ಶಾಸನಗಳ ಸಂಖ್ಯೆ ಹೆಚ್ಚಾಯಿತು. ವಿಭಿನ್ನತೆಯುಳ್ಳ ವಿಷಯಗಳು ಶಾಸನದಲ್ಲಿ ಸ್ಥಾನ ಪಡೆದವು. ಸಮಾಜದಲ್ಲಿದ್ದ ವಿವಿಧ ಪದ್ಧತಿಗಳು ಈ ಸಮಯದಲ್ಲಿ ಶಾಸನ ಶಿಲ್ಪದೊಳಗೆ ಕಾಣಿಸಿಕೊಂಡವು. ದಾನಶಾಸನದಲ್ಲಿ ಶಿವಲಿಂಗ, ಅದರ ಬಳಿ ಕುಳಿತವ

ದಾನಿ, ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರ ಸಾಮಾನ್ಯವಾಯಿತು. ಸ್ಮಾರಕ ಶಿಲೆಗಳಲ್ಲಿ ಹಂತ-ಹಂತಗಳಲ್ಲಿ ವಿಷಯ ನಿರೂಪಣಾ ಪದ್ಧತಿ ಬೆಳೆದುಬಂದಿತು. ಘಟನೆಯ ಚಿತ್ರಣಕ್ಕೆ ನೈಜತೆಯನ್ನು ತರಲು ಪ್ರಯತ್ನಿಸಲಾಯಿತು. ಉಪಯೋಗಗಳನ್ನು ಕಾವ್ಯಾತ್ಮಕವಾಗಿ ಕಾಣುವಂತೆ ಮಾಡಲು ಪ್ರಯತ್ನಿಸಿದರು. ಈ ಪ್ರಯತ್ನಗಳಿಂದ ಶಾಸನಗಳಲ್ಲಿ ಕಲೆಗಾರಿಕೆ ಅಭಿವೃದ್ಧಿಯಾಯಿತು. ಒಂದೊಂದು ಶಾಸನ ಪ್ರಕಾರಕ್ಕೂ ಒಂದೊಂದು ಸೂತ್ರವನ್ನು ಅನುಸರಿಸಿದರು. ತುರುಗೋಳ್ ವೀರಗಲ್ಲುಗಳಲ್ಲಿ ಹೋರಾಟದ ಹಂತದಲ್ಲಿ ವೀರನ ಹಿಂಭಾಗದಲ್ಲಿ ದನಗಳನ್ನು ಕಡ್ಡಾಯವಾಗಿ ಚಿತ್ರಿಸುತ್ತಿದ್ದರು.[೪೪] ಇದರಿಂದಾಗಿ ಶಾಸನ ಇಲ್ಲದಿದ್ದರೂ ಅದರ ಶಿಲ್ಪದ ಆಧಾರದಿಂದ ಆ ವೀರಗಲ್ಲು ತುರುಗೋಳ್ ಯುದ್ಧದ ವೀರಗಲ್ಲೆಂದು ಗುರುತಿಸಲು ಸುಲಭವಾಯಿತು.

ಇವರಕಾಲದ ವೀರಗಲ್ಲುಗಳಲ್ಲಿ ವೀರನನ್ನು ಚಿತ್ರಿಸುವರೀತಿ ಬದಲಾಗಿರುವುದನ್ನು ಗಮನಿಸಬಹುದು. ವೀರರಜೊತೆ ಅನ್ಯ ವಿವರಗಳಿಗೂ ಆಸ್ಪದ ನೀಡಲಾಯಿತು. ಇದರ ಪರಿಣಾಮವಾಗಿ ಕೆಲವು ವೀರಗಲ್ಲುಗಳಲ್ಲಿ ವೀರನಷ್ಟೇ ಪ್ರಾಧಾನ್ಯವನ್ನು ವೈರಿಗಳಿಗೂ ನೀಡಿದರು. ಸೈನಿಕರನ್ನು ಮಹಾಸತಿಯರನ್ನು ವೀರನಿಗೆ ಸರಿಸಮಾನವಾಗಿ ಚಿತ್ರಿಸಿದ ಪರಿಪಾಠ ಆರಂಭವಾಯಿತು. ಈ ಪಾರಿಪಾಠ ಶಾಸನ ಶಿಲ್ಪಗಳ ಆರೋಗ್ಯ ಪೂರ್ಣ ಬೆಳವಣಿಗೆಗೆ ಮಾದರಿಯಾಯಿತು. ಗಂಗರ ಅವಧಿಯ ಆತ್ಮಬಲಿಯ ಶಿಲ್ಪಮಾತ್ರ ಕಂಡುಬರುತ್ತದೆ. ಉದಾಹರಣೆಗೆ ನಗರಗೆರೆಯ ಸಿಡಿತಲೆ ಶಿಲ್ಪದಲ್ಲಿ ವೀರನೊಬ್ಬನನ್ನೇ ಚಿತ್ರಿಸಿರುವುದನ್ನು ನೋಡಬಹುದು. ಆದರೆ ಕಲ್ಯಾಣ ಚಾಲುಕ್ಯರ ಹಾಗೂ ಹೊಯ್ಸಳರ ಶಾಸನ ಶಿಲ್ಪದಲ್ಲಿ ವೀರನ ಜೊತೆ ತಲೆಕಡಿಯುವವನ ಮತ್ತು ಅವನ ಅಕ್ಕಪಕ್ಕ ವಾದ್ಯ ಕಾರರ ಚಿತ್ರವಿರುತ್ತದೆ. ಬಸ್ರಾಳು, ಬಳ್ಳಿಗಾವಿ ಮೊದಲಾದ ಸ್ಥಳದಲ್ಲಿರುವ ಸಿಡಿತಲೆ ಶಾಸನಗಳಲ್ಲಿ ಈ ರೀತಿಯ ಶಿಲ್ಪವನ್ನು ಕಾಣಬಹುದು. ತರುಗಾಳಗದ ಸಮಯದಲ್ಲಿ ದನಗಳನ್ನು ಅಪಹರಿಸುವ ಚಿತ್ರಣದ ಜೊತೆಗೆ ಸ್ತ್ರೀ ಮಾನಭಂಗದ ಚಿತ್ರಣವೂ ಇರುತ್ತದೆ. ಅಬ್ಬಲೂರುಮೊದಲಾದ ಸ್ಥಳಗಳ ವೀರಗಲ್ಲುಗಳಲ್ಲಿ ಈ ರೀತಿಯ ಬಹುಮುಖದ ಚಿತ್ರಣವನ್ನು ನೋಡಬಹುದು.[೪೫]

ಕಲ್ಯಾಣ ಚಾಲುಕ್ಯರ ಹಾಗೂ ಕಲಚೂರಿಗಳ ಕಾಲದಲ್ಲಿ ಬೆಳೆದ ಶಾಸನ ಶಿಲ್ಪದ ಕಲೆಗಾರಿಕೆ ಹೊಯ್ಸಳರ ಕಾಲಕ್ಕೆ ಸೂಕ್ಷ್ಮತೆಯ ಪರಾಕಾಷ್ಠೆಯನ್ನು ಮುಟ್ಟಿತು. ದೇವಾಲಯಗಳ ಶಿಲ್ಪಗಳಂತೆಯೇ, ಶಾಸನಗಳ ಶಿಲ್ಪವೂಕೂಡ ಸೂಕ್ಷ್ಮ ಕೆತ್ತನೆಗಳಿಂದ ನಿರ್ಮಾಣವಾಗತೊಡಗಿದವು. ಉಡುಪು, ಆಭರಣ, ಕೇಶ ಶೃಂಗಾರ, ಭಾವಭಂಗಿಗಳು ಪ್ರಧಾನಸ್ಥಾನ ಪಡೆದವು. ಗಾಂಭೀರ್ಯತೆಗಿಂತಲೂ ಸೂಕ್ಷ್ಮ ಕಲೆಗಾರಿಕೆಗೆ ಮಹತ್ವ ವುಂಟಾಯಿತು. ಇವರ ಲಾಂಛನವಾದ ಹುಲಿಯನ್ನು ಕೊಲ್ಲುತ್ತಿರುವ ಸಳನ ಚಿತ್ರವು ಬಹುತೇಕ ದೇವಾಲಯಗಳ ಗೋಪುರದ ಮುಂಭಾಗದಲ್ಲಿ ಕಂಡುಬರುತ್ತದೆ. ಗಂಗರ

ಕಾಲದಲ್ಲಿ ಅವರ ರಾಜ ಲಾಂಛನವಾದ ಆನೆಯ ಚಿತ್ರಣವು ಅವರ ಅನೇಕ ಶಿಲಾಶಾಸನಗಳ ಮೇಲೆ ಮತ್ತು ತಾಮ್ರ ಶಾಸನಗಳ ಉಂಗುರುಗಳ ಮೇಲೆ ಇದೆ. ಕದಂಬರ ತಾಮ್ರ ಶಾಸನದ ಉಂಗುರದಲ್ಲಿ ಸಿಂಹಲಾಂಛನ, ರಾಷ್ಟ್ರಕೂಟರ ಶಾಸನಗಳ ಮೇಲೆ ನೇಗಿಲು ಮತ್ತು ವಿಜಯನಗರ ಅರಸರ ಕೆಲವುಶಾಸನಗಳಲ್ಲಿ ವರಹಾದ ಚಿಹ್ನೆ ಕಂಡುಬರುತ್ತದೆ.[೪೬]

ಹೊಯ್ಸಳರ ದೇವಾಲಯಗಳಲ್ಲಿ ಮಾತ್ರವಲ್ಲದೆ ಅವರ ಕಾಲದ ಶಾಸನಗಳಲ್ಲೂ ಹುಲಿಯನ್ನು ಕೊಲ್ಲುತ್ತಿರುವ ಸಳನ ಚಿತ್ರವಿರುವುದು ಕಂಡುಬಂದಿದೆ. ಚಿಕ್ಕಮಗಳೂರು ಜಿಲ್ಲೆಯ ಉಪ್ಪವಳ್ಳಿಯ ಒಂಭತ್ತು ಬೀರಗಲ್ಲುಗಳಲ್ಲಿ ಮೇಲಿನ ಹಂತದ ಯಾಳಿಯ ಮುಖದ ಎರಡೂ ಬದಿಯಲ್ಲಿ ಹೊಯ್ಸಳ ಲಾಂಛನವಿದೆ. ಇಲ್ಲಿನ ಶಾಸನಗಳಲ್ಲಿ ಮಾತ್ರ ಈ ಲಾಂಛನಗಳು ಕಂಡುಬಂದಿರುವುದು ಗಮನಾರ್ಹವಾಗಿವೆ. ಹೊಯ್ಸಳರ ರಾಜಧಾನಿಯಲ್ಲಿರುವ ಶಾಸನಗಳಲ್ಲೂ ಈ ರೀತಿ ರಾಜ ಲಾಂಛನಗಳ ಚಿತ್ರಣವಿಲ್ಲ. ಇವರ ಕಾಲದ ಯಾವ ಶಾಸನಶಿಲ್ಪವನ್ನೂ ನೋಡಿದರೂ ವೈಭವಪೂರ್ಣ ಕೆತ್ತನೆ ಕಂಡುಬರುತ್ತದೆ. ಕೆತ್ತನೆಯಲ್ಲಿ ಹಾಗೂ ವಿಷಯ ನಿರೂಪಣೆಯಲ್ಲಿ ಒಂದು ನಿರ್ದಿಷ್ಟ ಸೂತ್ರವನ್ನು ಅನುಸರಿಸಿದ್ದರಿಂದ, ಶಾಸನಗಳು ಒಂದರ ಪಡಿಯಚ್ಚಿನಂತೆ ಮತ್ತೊಂದು ಎಂಬಂತಾಯಿತು. ಇದರಿಂದ ಶಾಸನಶಿಲ್ಪದಲ್ಲಿ ಏಕತಾನತೆಗೆ ಆಸ್ಪದವಾಯಿತು.

ವಿಜಯನಗರ ಅರಸರ ಕಾಲದಲ್ಲಿ ಹೊಯ್ಸಳರ ಸೂಕ್ಷ್ಮ ಶೈಲಿಯು ಬದಲಾಗಿ ಒರಟುತನ ಪ್ರಧಾನವಾಯಿತು. ಶಾಸನಗಳಲ್ಲಿ ಶಿಲ್ಪವನ್ನು ಸೂಕ್ಷ್ಮವಾಗಿ ಚಿತ್ರಿಸುವ ಬದಲು ಸ್ಥೂಲವಾಗಿ ಚಿತ್ರಿಸುವ ವಿಧಾನ ಬೆಳೆಯಿತು. ಕಲೆಗಾರಿಕೆ, ಗೌಣವಾಗಿ, ವಿಷಯವನ್ನು ತಿಳಿಸುವುದೇ ಮುಖ್ಯ ಕೆಲಸವಾಯಿತು. ದಾನಶಾಸನಗಳಲ್ಲಿ ಕೇವಲ ಧಾರ್ಮಿಕ ಚಿಹ್ನೆಗಳನ್ನು ಮಹಾಸತಿ ಶಾಸನಗಳಲ್ಲಿ ಸತಿಯನ್ನು ಅಥವಾ ಅವಳ ತೋಳನ್ನು ವೀರಗಲ್ಲುಗಳಲ್ಲಿ ವೀರ ಹಾಗೂ ಎದುರಾಳಿಯನ್ನು ಮಾತ್ರ ಚಿತ್ರಿಸುವ ರೂಢಿ ಬೆಳೆಯಿತು. ಅಲ್ಲದೆ ಲಿಪಿಯಲ್ಲದ ಸ್ಮಾರಕ ಶಿಲೆಗಳು ಸಂಖ್ಯೆಯಲ್ಲಿ ಹೆಚ್ಚಾದವು. ಕೇವಲ ಒಂದು ಸಂಪ್ರದಾಯವಾಗಿ ಬೆಳೆಯಿತು. ಆದರೆ ಕಲ್ಯಾಣಿ ಚಾಲುಕ್ಯರ ವೀರಗಲ್ಲುಗಳನ್ನು ಹೋಲುವ ವೀರಗಲ್ಲುಗಳು ಕಾಯ್ಕಿಣಿ, ಭಟ್ಕಳ, ಮುಂತಾದ ಉತ್ತರ ಕನ್ನಡ ಜಿಲ್ಲೆಯ ಹಲವು ಪ್ರದೇಶಗಳಲ್ಲಿ ಕಂಡುಬರುತ್ತದೆ.[೪೭]

## ಮೋರಿಗೆರೆಯ ಶಾಸನ ಶಿಲ್ಪ

ಕನ್ನಡ ನಾಡಿನಲ್ಲಿ ದೊರೆಯುವ ಶಾಸನಗಳು, ದಾನಶಾಸನಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳು, ಸಿಡಿತಲೆಗಲ್ಲುಗಳು, ಗೋಶಾಸನಗಳು, ದೊರೆಯುತ್ತವೆ. ಶಾಸನ ಸಹಿತವಾದ ಶಾಸನಗಳನ್ನು ಮಾತ್ರ ತೆಗೆದುಕೊಂಡು ಅವುಗಳಲ್ಲಿರುವ ವಿಷಯಗಳನ್ನು ಆಧ್ಯಯನ ಮಾಡುವುದು ಒಂದು ವಿಧವಾದರೆ, ಸೃಜನ ಶೀಲ ವಿದ್ವಾಂಸರುಗಳು ಶಾಸನ ರಹಿತ ಮತ್ತು ಶಾಸನ ಸಹಿತ ಶಾಸನಗಳನ್ನು ಬಳಸಿಕೊಂಡು ಅವುಗಳ ಶಿಲ್ಪವನ್ನು ಕುರಿತು ಅಧ್ಯಾಯನ ಮಾಡುವುದು ಇನ್ನೊಂದು ವಿಧವಾಗಿದೆ. ಈ ರೀತಿಯ ಅಧ್ಯಯನಗಳು

ಬಹಳ ಮುಖ್ಯವಾಗಿದೆ. ಶಾಸನ ಶಿಲ್ಪದಲ್ಲಿ ಕೇವಲ ಶಾಸನದ ಶಿಲ್ಪದ ಚಿತ್ರಣವನ್ನು ಮಾತ್ರವಲ್ಲದೆ, ಅಲ್ಲಿಯ ಜನರ ಬದುಕಿನಲ್ಲಿ ಬಂದ ವಸ್ತುಗಳ ಬಳಕೆ, ಆಭರಣಗಳು, ಯುದ್ಧದ ವರ್ಣನೆಗಳು, ಅಂದಿನ ಸಮಾಜದ ಬದುಕಿನಲ್ಲಿ ಬೇರೂರಿದ್ದ ಧಾರ್ಮಿಕ ಆಚರಣೆಗಳು, ತ್ಯಾಗ ಬಲಿದಾನವನ್ನು ಕುರಿತು, ಅಭ್ಯಾಸಿಸಲು ಶಾಸನ ಶಿಲ್ಪವು ಬಹಳ ಮುಖ್ಯವಾದದ್ದು.

ಮುಖ್ಯವಾಗಿ ಶಾಸನ ಶಿಲ್ಪಕ್ಕೆ ಸಂಬಂಧಿಸಿದಂತೆ ಮೋರಿಗೆರೆ ಗ್ರಾಮದಲ್ಲಿ ದೊರೆಯುವ ಶಾಸನಗಳ ಶಿಲ್ಪವನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಇಲ್ಲಿ ಮುಖ್ಯವಾಗಿ ದೊರೆಯುವ ವೀರಗಲ್ಲು ಶಾಸನಶಿಲ್ಪ, ನಂದಿಯಶಿಲ್ಪ, ಶಿವಲಿಂಗದ ಚಿತ್ರಣವಿರುವ ಶಿಲ್ಪಗಳು ಕಂಡುಬರುತ್ತವೆ. ಇಲ್ಲಿ ಯಾವುದೇ ವಿಭಾಗವನ್ನು ಮಾಡಲು ಹೋಗಿಲ್ಲ, ಕಾರಣ ಅಧ್ಯಯನದ ವ್ಯಾಪ್ತಿ, ಸಾಮಗ್ರಿಗಳು, ಸೀಮಿತ ಪ್ರದೇಶವನ್ನಿಟ್ಟುಕೊಂಡು ಅಧ್ಯಯನ ಮಾಡುವುದರಿಂದ ಇಲ್ಲಿ ಮುಖ್ಯವಾಗಿ ದೊರೆಯುವ ಸಾಮಗ್ರಿಗಳ ಹಿನ್ನಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಇಲ್ಲಿಯವರೆಗೆ ಶಾಸನಗಳನ್ನು ನೋಡುವ ದೃಷ್ಟಿಕೋನ ರಾಜಕೀಯ ಚರಿತ್ರೆಯ ಹಿನ್ನಲೆಯದ್ದಾಗಿದೆ. ಆದರೆ ಇಂದಿನ ಇತಿಹಾಸಕಾರರು ಶಾಸನಗಳಲ್ಲಿ ಬರುವ ರಾಜ ಮಹಾರಾಜ ಇತಿಹಾಸವನ್ನಲ್ಲದೇ, ಸಾಮಾನ್ಯ ಜನರ ಬದುಕಿನ ಜೀವನ ಶೈಲಿ, ಆಚರಣೆ, ಸಂಪ್ರದಾಯ, ಉಡುಪು, ಆಭರಣಗಳನ್ನು ಕುರಿತು ಅಧ್ಯಯನ ಮಾಡುವುದರೊಂದಿಗೆ ಸಾಂಸ್ಕೃತಿಕ ಚರಿತ್ರೆಯ ಕಡೆಗೆ ಅಧ್ಯಯನದ ನೆಲೆಗಳು ವಿಭಿನ್ನಗೊಂಡಿರುವುದನ್ನು ನಾವು ಗಮನಿಸಿ, ಇನ್ನೂ ಸೂಕ್ಷ್ಮವಾದ ಅಧ್ಯಯನವೆಂದರೆ ಕುಸುರಿ ಕೆಲಸ ಮಾಡುವ ನವ ವಿದ್ವಾಂಸರುಗಳು ಗಮನಹರಿಸಿ ಅಧ್ಯಯನದ ಹೊಸ ಹಾದಿಯ ಕಡೆಗೆ ಸಾಗಬೇಕಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಶಾಸನ ಶಿಲ್ಪವನ್ನು ಕೆಳಗಿನಂತೆ ವಿವರಿಸುವ ಅಂಶಗಳ ಆಧಾರದ ಮೇಲೆ ಅಧ್ಯಯನವನ್ನು ಮಾಡುವ ಪ್ರಯತ್ನಮಾಡಿದ್ದೇನೆ. ಇಲ್ಲಿ ಮುಖ್ಯವಾಗಿ ಶೈವ ಶಾಸನ ಶಿಲ್ಪಗಳು ಮಾತ್ರ ದೊರಕುತ್ತವೆ.

**ದಾನ ಶಾಸನ ಶಿಲ್ಪ**

ಮೋರಿಗೆರೆ ಗ್ರಾಮಕ್ಕೆ ಸಂಬಂಧಿಸಿದ ಶಾಸನವು ಇದೇ ಗ್ರಾಮದಲ್ಲಿರುವ ಉದ್ದಿವಸವಣ್ಣನ ದೇವಾಲಯದಲ್ಲಿದೆ. ಈ ಶಾಸನವು ನಂದಿಯ ಶಿಲ್ಪವನ್ನು ಹೊಂದಿದೆ. ಈ ರೀತಿಯಶಾಸನ ಶಿಲ್ಪಗಳು ಶೈವಧರ್ಮಕ್ಕೆ ಸಂಬಂಧಿಸಿದ ದಾನ ಶಾಸನ ಶಿಲ್ಪಗಳಲ್ಲಿ ಕಂಡುಬರುತ್ತದೆ.

ಮೋರಿಗೆರೆ ಪ್ರದೇಶದಲ್ಲಿರುವ ಕ್ರಿ.ಶ.೧೦೬೪ ರ ವೆಂಗಿಮಣ್ಡಳೇಶ್ವರ ಶ್ರೀ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯನ ಕಾಲದಲ್ಲಿ ದಕ್ಷಿಣ ದಿಕ್ಕಿನ ದಿಗ್ವಿಜಯಾರ್ಥವಾಗಿ ಬಂದಾಗ ಮೋರಿಂಗೆರೆಯ ನೊಳಂಬೇಶ್ವರದೇವರ..... ಪಂಡಿತರ ಕಾಲನ್ನು ತೊಳೆದು ಪಾರಮೇಶ್ವರ

ದತ್ತಿಯಾಗಿ ಭೂಮಿಕೊಟ್ಟ ಶಾಸನದ[೪೮] ಮೇಲ್ಭಾಗದಲ್ಲಿ ನಂದಿಯ ಶಿಲ್ಪ ಮತ್ತು ಶಿವಲಿಂಗವನ್ನು ಶಾಸನ ಶಿಲ್ಪ ಹೊಂದಿದೆ. ಈ ರೀತಿಯ ಶಾಸನ ಶಿಲ್ಪಗಳು ಶೈವಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ.

ಇದೇ ಗ್ರಾಮದಲ್ಲಿ ಇದೇ ದೇವಾಲಯದ ಮುಖ ಮಂಟಪದಲ್ಲಿರುವ ಶಾಸನ. ಕ್ರಿ.ಶ.೧೦೪೬ ರ ಕಲ್ಯಾಣದ ಚಾಲುಕ್ಯ ಅರಸ ತ್ರೈಲೋಕ್ಯ ಮಲ್ಲದೇವನ ಕಾಲದ ಶಾಸನದ ಮೇಲ್ಭಾಗದಲ್ಲಿ ಶಿವಲಿಂಗದ ಜೊತೆ ಕುಳಿತಿರುವ ನಂದಿಶಿಲ್ಪ ಮತ್ತು ನಂದಿ ನಿಂತುಕೊಂಡಿರುವ ಶಾಸನ ಶಿಲ್ಪವಿದೆ. ಈ ಶಾಸನ ಶಿಲ್ಪಗಳು ಶೈವಧರ್ಮಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ಮಾತ್ರ ಕಂಡುಬರುತ್ತದೆ. ಮೋರಂಗೆರೆ ಮೊದಲಾದ ಆರು ಊರುಗಳನ್ನು ಆಳುತ್ತಿದ್ದಾಗ ಮೋರಂಗೆರೆಯನ್ನು ಬಲ್ಲವರಸನ ಕೈಲಿಪಡೆದು ನೊಳಂಬೇಶ್ವರದೇವರಿಗೆ[೪೯] ವಿದ್ಯಾಭ್ಯಾಸಕ್ಕಾಗಿ ಪಾದಮೂಲಪರಿವಾರ ಮುಂತಾದುವಕ್ಕೆ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು, ವಿರೂಪಾಕ್ಷದೇವರ ಸಮಕ್ಷಮದಲ್ಲಿ ಭೂಮಿದಾನಕೊಟ್ಟಶಾಸನ.

### ವೀರಶಾಸನ ಶಿಲ್ಪ

ಮೋರಿಗೆರೆಯ ಗ್ರಾಮದ ಬ್ರಹ್ಮದೇವಾಲಯದಲ್ಲಿ ದೊರೆತ ವೀರಗಲ್ಲು ಶಾಸನ ಶಿಲ್ಪವು ಶಾಸನ ಸಹಿತವಾಗಿದೆ. ಅದರೊಂದಿಗೆ ಈ ಶಾಸನ ಶಿಲ್ಪದಲ್ಲಿ ವ್ಯಕ್ತಿಯೊಬ್ಬನು ಹೊರಾಡುತ್ತಿರುವ ದೃಶ್ಯವನ್ನು ನೋಡಬಹುದು ಈ ವೀರಗಲ್ಲು ಶಾಸನವು ಮೂರು ಹಂತಗಳನ್ನು ಹೊಂದಿದೆ. ಮೊದಲನೇ ಹಂತದಲ್ಲಿ ವೀರನು ಹೋರಾಡುತ್ತಿರುವ ದೃಶ್ಯವಿದೆ. ಎರಡನೇ ಹಂತದಲ್ಲಿ ಇಬ್ಬರು ಸುರಾಂಗನೆಯರು ಹಿಡಿದುಕೊಂಡು ಹಾರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಶಿವಲಿಂಗದ ಸಾನಿಧ್ಯದಲ್ಲಿ ಕುಳಿತು ವೀರನು ಪೂಜಿಸುತ್ತಿರುವ ದೃಶ್ಯವಿದೆ.

ಇದೇ ಗ್ರಾಮದಲ್ಲಿ ಬ್ರಹ್ಮದೇವಾಲಯದಲ್ಲಿ ದೊರೆತ ವೀರುಗಲ್ಲು ಶಾಸನ ಶಿಲ್ಪವು ಮೂರು ಹಂತಗಳನ್ನು ಮಾತ್ರ ಹೊಂದಿದೆ. ಕೆಳಭಾಗದ ಹಂತದಲ್ಲಿ ವೀರನು ಬಿಲ್ಲು, ಬಾಣಗಳನ್ನು ಹಿಡಿದುಕೊಂಡು.ಕುದುರೆ ಮೇಲೆ ಕತ್ತಿಯನ್ನು ಹಿಡಿದುಕೊಂಡು ವೀರನೊಂದಿಗೆ ಹೋರಾಡುವ ದೃಶ್ಯವನ್ನು ಎರಡನೇ ಹಂತದಲ್ಲಿ ವೀರನನ್ನು ಸುರಾಂಗನೆಯರಿಬ್ಬರು ಹಿಡಿದುಕೊಡು ಹಾರುವ ದೃಶ್ಯವನ್ನು ಮೂರನೇಹಂತದರ್ಲ್ಲಿ ವೀರನು ಶಿವಲಿಂಗದ ಸಾನಿಧ್ಯದಲ್ಲಿ ಕುಳಿತು ವೀರನು ಪೂಜಿಸುತ್ತಿರುವ ಶಾಸನ ಶಿಲ್ಪ.

ಇದೇ ಗ್ರಾಮದಲ್ಲಿ ದೊರೆತ ವೀರಗಲ್ಲು ಶಾಸನ ಶಿಲ್ಪವು ಮೂರುಹಂತಗಳನ್ನೊಳಗೊಂಡಿದೆ. ಮೊದಲನೆಯ ಹಂತದಲ್ಲಿ ಇಬ್ಬರು ವೀರರು ಶತೃಗಳೊಂದಿಗೆ ಹೋರಾಡುತ್ತಿರುವಂತೆ, ಅವರ ಕಾಲಬಳಿ ಕುದುರೆಗಳು ಹಾಗೂ ಬಿದ್ದಿರುವ ಹೆಣದ ದೃಶ್ಯವನ್ನು ಕಾಣಬಹುದು. ಎರಡನೆಯ ಹಂತದಲ್ಲಿ ವೀರನು ಧ್ಯಾನ ಮಗ್ನನಾಗಿ

ಕುಳಿತಿರುವ ದೃಶ್ಯ ಹಾಗೂ ಅಕ್ಕ-ಪಕ್ಕದಲ್ಲಿ ಸುರಾಂಗನೆಯರಿದ್ದಾರೆ, ಮೂರನೇ ಹಂತದಲ್ಲಿ ಶಿವಲಿಂಗ ಬಳಿವೀರನು ನಿಂತಿರುವ ದೃಶ್ಯವನ್ನು ಶಾಸನ ಶಿಲ್ಪದಲ್ಲಿ ಕಾಣಬಹುದು.

**ಮಾಸ್ತಿ ಶಾಸನ ಶಿಲ್ಪ**

ಮಾಸ್ತಿ ಶಾಸನ ಶಿಲ್ಪವು ಮೋರಿಗೆರೆ ಗ್ರಾಮದ ಬ್ರಹ್ಮದೇವಾಲಯದಲ್ಲಿ ದೊರೆತ ಮಾಸ್ತಿಗಲ್ಲು ಶಾಸನ ಶಿಲ್ಪವು ಈ ಶಾಸನವು ಶೈವಶಾಸನವಾಗಿದ್ದು ಎರಡು ಹಂತಗಳನ್ನು ಮಾತ್ರ ಹೊಂದಿದೆ. ಈ ಮಾಸ್ತಿಗಲ್ಲು ಶಾಸನ ಶಿಲ್ಪವನ್ನು ನೋಡಿದರೆ ವೀರನಿಗೆ ಇಬ್ಬರು ಪತ್ನಿಯರಿದ್ದು ಯುದ್ಧಕ್ಕೆ ಹೋದಾಗ ವೀರನು ಮಡಿದ ಸುದ್ದಿಯನ್ನು ಕೇಳಿ ಮಹಾಸತಿಯರಿಬ್ಬರು ಕೈಗಳಲ್ಲಿ ನಿಂಬೆಹಣ್ಣುಗಳನ್ನು ಹಿಡಿದು ಇಬ್ಬರು ಬಲಗೈ ಮೇಲೆ ಎತ್ತಿದ್ದಾರೆ, ಇವರಿಬ್ಬರ ಮಧ್ಯೆ ವೀರನು ಕೈಮುಗಿದು ಕುಳಿತುಕೊಂಡಿರುವ ದೃಶ್ಯವಿದೆ. ಮೇಲಿನಹಂತದಲ್ಲಿ ಶಿವಲಿಂಗದ ಮುಂದೆ ವೀರನು ನಿಂತುಕೊಂಡು ಆರಾಧನೆಯಲ್ಲಿ ತೊಡಗಿರುವ ದೃಶ್ಯ. ಶಿವಲಿಂಗಕ್ಕೆ ಎದುರಾಗಿ ವೃಷಭಬಲಗಾಲನ್ನು ಚಾಚಿಕೊಂಡು ಆಸೀನನಾಗಿರುವ ದೃಶ್ಯ ಅದರ ಅಕ್ಕಪಕ್ಕಗಳಲ್ಲಿ ಸೂರ್ಯ,ಚಂದ್ರರಿಬ್ಬರಿರುವ ಇರುವ ಚಿತ್ರವನ್ನು ಕಾಣಬಹುದು.

**ಇತರೆ ಶಾಸನ ಶಿಲ್ಪ**

ಮೋರಿಗೆರೆಯ ಗ್ರಾಮದಲ್ಲಿ ಇತರೆ ಶಾಸನಶಿಲ್ಪಗಳು ಕಂಡುಬರುವುದಿಲ್ಲ. ಅಂದರೆ ತಲೆಯನ್ನು ಕತ್ತರಿಸುವ ಸಿಡಿತಲೆಗಳು ಶಾಸನಶಿಲ್ಪ ಕಂಡುಬರುವುದಿಲ್ಲ ಎನ್ನುವುದುಉಲ್ಲೇಖ.

ಈ ಶಾಸನ ಶಿಲ್ಪಗಳನ್ನು ಗಮನಿಸಿದಾಗ ಸಂಶೋಧಕನನ್ನು ಹಲವು ಆಲೋಚನೆಗಳಿಗೆ ದಾರಿಮಾಡಿಕೊಡುತ್ತದೆ. ಆದ್ದರಿಂದ ಇಲ್ಲಿಬರುವ ವೀರನ ಪ್ರಾಣತ್ಯಾಗ, ದೈವದ ಬಗ್ಗೆ, ಹೆಣ್ಣಿನ ಅಬಲತೆ, ಇದ್ದ ಅಗಾಧವಾದ ನಂಬಿಕೆಗಳು, ಇವುಗಳನ್ನು ತಿಳಿದುಕೊಂಡ ರಾಜತ್ವವು, ಸಾಮಾನ್ಯ ಜನರ ಮೇಲೆ ತಮ್ಮ ಅಧಿಕಾರತ್ವವನ್ನು ಸಂಪೂರ್ಣವಾಗಿ ಚಲಾಯಿಸಿದ್ದನ್ನು ಮತ್ತು ಅದನ್ನು ಬಳಸಿಕೊಂಡಿದ್ದನ್ನು ನಾವು ಇಲ್ಲಿ ಅರ್ಥೈಯಿಸಲು ಸುಲಭವಾಗುತ್ತದೆ.

## ಅಡಿಟಿಪ್ಪಣಿಗಳು

೧) ಹಿರೇಮಠ ಬಿ.ಆರ್. ವೀರಗಲ್ಲುಗಳು ೧೯೭೬. ಪು-೪
೨) ಅದೇ-೧೯೭೬ ಪು-೫
೩) ಚಿದಾನಂದ ಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ೧೯೭೯. ಪು-೩೩೪
೪) ಅದೇ- ೧೯೭೯ ಪು-೩೩೬
೫) ಪರಮಶಿವಮೂರ್ತಿ ಡಿ.ವಿ. ಕನ್ನಡ ಶಾಸನಶಿಲ್ಪ. ೧೯೯೯.ಪು-೧೬೪
೬) ಚಿದಾನಂದ ಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ೧೯೭೯ ಪು-೩೪೨
೭) ರವೀಂದ್ರನಾಥ.ಕೆ. ಕನ್ನಡ ದಾಖಲು ಸಾಹಿತ್ಯ ೨೦೦೦ ಪು-೪೨
೮) ಅದೇ-೨೦೦೦ ಪು-೪೩
೯) ಶೇಷಶಾಸ್ತ್ರೀ ಆರ್. ಶಾಸನ ಶಾಸ್ತ್ರ ಪರಿಚಯ. ೧೯೮೨ ಪು-೨೨
೧೦) ಪರಮಶಿವಮೂರ್ತಿ ಡಿ.ವಿ. ಕನ್ನಡ ಶಾಸನಶಿಲ್ಪ. ೧೯೯೯ ಪು-೭೯
೧೧) ರವೀಂದ್ರನಾಥ.ಕೆ. ಕನ್ನಡ ದಾಖಲು ಸಾಹಿತ್ಯ ೨೦೦೦ ಪು-೪೩
೧೨) ಅದೇ-೨೦೦೦ ಪು-೪೩
೧೩) ಅದೇ-೨೦೦೦ ಪು-೪೪
೧೪) ಅದೇ-೨೦೦೦ ಪು-೪೪
೧೫) ಅದೇ-೨೦೦೦ ಪು-೪೫
೧೬) ಅದೇ-೨೦೦೦ ಉಲ್ಲೇಖ
೧೭) ಅದೇ-೨೦೦೦ ಪು-೪೫
೧೮) ಅದೇ-೨೦೦೦
೧೯) ಅದೇ-೨೦೦೦
೨೦) ಶೇಷಶಾಸ್ತ್ರಿ ಆರ್. ಶಾಸನಶಾಸ್ತ್ರ ಪರಿಚಯ ೧೯೮೨ ಪು- ೨೯
೨೧) ರವೀಂದ್ರನಾಥ.ಕೆ. ಕನ್ನಡ ದಾಖಲು ಸಾಹಿತ್ಯ ೨೦೦೦ ಪು-೪೯
೨೨) ಶೇಷಶಾಸ್ತ್ರೀ ಆರ್. ಶಾಸನ ಶಾಸ್ತ್ರ ಪರಿಚಯ. ೧೯೮೨ ಪು-೩೦
೨೩) ಅದೇ-೧೯೮೨
೨೪) ರವೀಂದ್ರನಾಥ.ಕೆ. ಕನ್ನಡ ದಾಖಲು ಸಾಹಿತ್ಯ ೨೦೦೦ ಪು-೪೭
೨೫) ಪರಮಶಿವಮೂರ್ತಿ ಡಿ.ವಿ. ಕನ್ನಡ ಶಾಸನಶಿಲ್ಪ. ೧೯೯೯ ಪು-೧೨೭
೨೬) ಶೇಷಶಾಸ್ತ್ರಿ ಆರ್. ಶಾಸನಾಶಾಸ್ತ್ರಪರಿಚಯ ೧೯೮೨ ಪು-೯೩

೨೭) ದೇವರಕೊಂಡಾರೆಡ್ಡಿ ಮತ್ತು ಇತರರು. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು-೧, ೧೯೯೮ ಹಗರಿಬೊಮ್ಮನಹಳ್ಳಿ ಪು-೨೮೩

೨೮) ಅದೇ-೧೯೯೮ ಹಗರಿಬೊಮ್ಮನಹಳ್ಳಿ ಪು-೨೮೬

೨೯) ಅದೇ-೧೯೯೮ ಹಗರಿಬೊಮ್ಮನಹಳ್ಳಿ ಪು-೨೮೯

೩೦) ಅದೇ-೧೯೯೮ ಹಗರಿಬೊಮ್ಮನಹಳ್ಳಿ ಪು-೨೮೮

೩೧) ಅದೇ-೧೯೯೮ ಹಗರಿಬೊಮ್ಮನಹಳ್ಳಿ ಪು-೨೮೪

೩೨) ಅದೇ-೧೯೯೮ ಹಗರಿಬೊಮ್ಮನಹಳ್ಳಿ ಪು-೨೯೦

೩೩) ಅದೇ-೧೯೯೮ ಹಗರಿಬೊಮ್ಮನಹಳ್ಳಿ ಪು-೨೮೯

೩೪) ಪರಮಶಿವಮೂರ್ತಿ ಡಿ.ವಿ. ಕನ್ನಡ ಶಾಸನಶಿಲ್ಪ. ೧೯೯೯ ಪು-೧೮

೩೫) ಅದೇ-೧೯೯೯ ಪು-೧೮

೩೬) ಅದೇ-೧೯೯೯ ಪು-೧೯

೩೭) ಅದೇ-೧೯೯೯ ಪು-೨೦

೩೮) ಅದೇ-೧೯೯೯

೩೯) ಅದೇ-೧೯೯೯

೪೦) ಅದೇ-೧೯೯೯ ಪು-೩೧

೪೧) ಅದೇ-೧೯೯೯ ಪು-೩೨

೪೨) ಅದೇ-೧೯೯೯ ಪು-೩೩

೪೩) ಅದೇ-೧೯೯೯

೪೪) ಅದೇ-೧೯೯೯ ಪು-೩೪

೪೫) ಅದೇ-೧೯೯೯

೪೬) ಅದೇ-೧೯೯೯ ಪು-೩೫

೪೭) ಅದೇ-೧೯೯೯ ಪು. ೩೯. ಉಲ್ಲೇಖ

೪೮) ದೇವರಕೊಂಡಾರೆಡ್ಡಿ ಮತ್ತು ಇತರರು. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು-೧, ೧೯೯೮ಹಗರಿಬೊಮ್ಮನಹಳ್ಳಿ ೨೮೭

೪೯) ಅದೇ- ೧೯೯೮ ಹಗರಿಬೊಮ್ಮನಹಳ್ಳಿ ಪು-೨೮೮.

# ಅಧ್ಯಾಯ : ೪, ಸಾಂಸ್ಕೃತಿಕ ಹಿನ್ನಲೆ

## ೪.೧ ಸಾಮಾಜಿಕ ಜೀವನ

ಮೋರಿಗೆರೆ ಪರಿಸರದಲ್ಲಿ ಗ್ರಾಮೀಣ ಜೀವನ ಪ್ರಧಾನವಾಗಿತ್ತು. ಅವಿಭಕ್ತ ಕುಟುಂಬ ಪದ್ಧತಿ ರೂಢಿಯಲ್ಲಿದ್ದಿತು. ತಂದೆಯೇ ಕುಟುಂಬದ ಯಜಮಾನ. ಆಸ್ತಿಯಹಕ್ಕು ಗಂಡುಮಕ್ಕಳಿಗೆ ಸೇರಿದುದು. ಪುತ್ರ ಸಂತಾನ ಇಲ್ಲದಿದ್ದಲ್ಲಿ ಮಾತ್ರ ಹೆಣ್ಣುಮಕ್ಕಳಿಗೆ ಆಸ್ತಿ ಪ್ರಾಪ್ತವಾಗುತ್ತಿತ್ತು. ಜನರು ವಿವಿಧ ಬಗೆಯ ವಸ್ತ್ರಾಭರಣಗಳಲ್ಲಿ ಅಭಿರುಚಿಯುಳ್ಳವರಾಗಿದ್ದರು. ಅಂತರ್ಜಾತೀಯ ವಿವಾಹಕ್ಕೆ ಆಸ್ಪದ ವಿರಲಿಲ್ಲ. ವಿವಾಹಸಂಬಂಧ ಆಯಾ ಗೋತ್ರಗಳಿಗೆ ಮಾತ್ರ ಸೀಮಿತವಾಗಿತ್ತು. ಈ ಕಾಲದಲ್ಲಿ ಜನಜೀವನ ಒಟ್ಟಾರೆ ಉತ್ತಮವಾಗಿದ್ದರೂ ಶ್ರೀ ಸಾಮಾನ್ಯನ ಬಗ್ಗೆ ಹೆಚ್ಚಿನ ವಿವರ ದೊರೆತಿಲ್ಲವಾಗಿದೆ. ಜಾತಿಪದ್ಧತಿ ಆಚರಣೆಯಲ್ಲಿದ್ದಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ  ಮತ್ತು ಶುದ್ರರೆಂಬ ನಾಲ್ಕು ಪ್ರಧಾನ ಜಾತಿಗಳಲ್ಲದೆ ಇತರ ಒಳಪಂಗಡಗಳೂ ಇದ್ದವು. ಬ್ರಾಹ್ಮಣರು ತಾವುಗಳಿಸಿದ ವಿದ್ಯೆ ಮತ್ತು ಧಾರ್ಮಿಕ ವಿಧಿ ಸಂಸ್ಕಾರಾದಿಗಳ ಆಚರಣೆಯಿಂದಾಗಿ ಸಮಾಜದಲ್ಲಿ ಅಭಿರುಚಿಯುಳ್ಳವರಾಗಿದ್ದರು.

ಸಾಮಾಜಿಕ ಸಂಬಂಧಗಳ ಬಲೆಯೇ ಸಮಾಜ. ಅಂದರೆ ಸಮಾಜದಲ್ಲಿ ಪ್ರತಿಯೊಬ್ಬ ಮನುಷ್ಯನ ಅನುಭೋಗದವಾತು ದಿನನಿತ್ಯದ ಅವಶ್ಯಕತೆಯ ಎಲ್ಲವನ್ನು ಒಳಗೊಂಡಿರುವಂತಹ ಪ್ರದೇಶವಾಗಿದೆ. ಇಂದಿನ ಮೋರಿಗೆರಿ ಪರಿಸರದಲ್ಲಿ ಕಂಡುಬರುವ ಸಾಮಾಜಿಕ ವರ್ಗಗಳು ಅವುಗಳಲ್ಲಿ ಲಿಂಗಾಯಾತರು, ಪಂಚಮಸಾಲಿಯವರು, ನಾಯಕರು, ಪರಿಶಿಷ್ಟಜಾತಿ, ಭೋವಿ ಮುಂತಾದ ವರ್ಗಗಳನ್ನು ನಾವು ಕಾಣಬಹುದು. ಆದರೆ ಈ ಪ್ರದೇಶದಲ್ಲಿ ಪ್ರಾಬಲ್ಯ ಇರುವ ವರ್ಗ ಬಹುಸಂಖ್ಯಾತದಲ್ಲಿರುತ್ತದೆ. ಆ ವರ್ಗ ಸಮಾಜದಲ್ಲಿ ಹಿಡಿತವನ್ನು ಸಾಧಿಸುತ್ತದೆ ಎಂಬುದನ್ನು ನಾವು ಇತಿಹಾಸದಿಂದ ತಿಳಿದುಕೊಳ್ಳಬಹುದು.

### ದೇವಸ್ಥಾನ: ಒಂದು ಸಾಮಾಜಿಕ ಸಂಸ್ಥೆ

ಪ್ರಾಚೀನ ಕನ್ನಡಿಗರಿಗೆ ದೇವಸ್ಥಾನ ನಿರ್ಮಾಣದ ವಿಷಯದಲ್ಲಿ ಹೆಚ್ಚು ಆಸಕ್ತಿ ಉಂಟಾಗುತ್ತಿತ್ತು. ಶ್ರೀಮಂತರಲ್ಲದೆ ಇತರರೂ ದೇವಸ್ಥಾನಗಳನ್ನು ನಿರ್ಮಿಸಿರುವರು. ಅದರ ಸಾರೋದ್ದಾರಾಕ್ಕಾಗಿ ಅದನ್ನು ಕಟ್ಟಿಸಿದವರು ಇತರರೂ ದತ್ತಿ-ದಾನಗಳನ್ನು ಬಿಡುತ್ತಿದ್ದರು. ದೇವರ ಪೂಜೆಯನ್ನು ಮಾಡುವವನೇ ಪೂಜಾರಿ, ಹೂವು ತರುವವನು ಮಾಲೆಕಾರ, ದೇವದಾಸಿಯರು ರಂಗಭೋಗವನ್ನು ಸಲ್ಲಿಸುತ್ತಿದ್ದರು.

### ದೇವಸ್ಥಾನ-ನ್ಯಾಯಾಲಯ

ದೇಗುಲದಲಿ ಒಮ್ಮೆ ಮಾತು ಕೊಟ್ಟರೆ ಅದನ್ನು ಪಾಲಿಸಬೇಕು. ನಿರಪರಾಧಿ ಮತ್ತು ಅಪರಾಧಿಯೆಂಬುದನ್ನು ನಿರ್ಧರಿಸುವುದು ಇಲ್ಲಿಯೇ. ಈ ವಿಷಯಕ್ಕೆ ಒಂದು ಉದಾಹರಣೆ, ಬಳ್ಳಾರಿ ಜಿಲ್ಲೆಯ ಹಿರೇಕುರುವತ್ತಿಯ ಶಾಸನ[೧], ಮಸಲ್ವಾಡದ ಬೊಪ್ಪಯ್ಯನು

ಹೊಳಲು ಬ್ರಾಹ್ಮಣರಿಗೆ ಹಿಂಸೆ ಮಾಡಿದನು. ಅದಕ್ಕೆ ಅವನ ಮೇಲೆ ಚಕ್ರವರ್ತಿಗೆ ದೂರು ಹೋಗುತ್ತದೆ. ಬೊಪ್ಪಯ್ಯನಿಂದ ತಪ್ಪನ್ನು ಒಪ್ಪಿಸಿ ಸುತ್ತಲಿನ ಅರಸರ ಮುಂದೆ ಒಂದು ಪತ್ರವನ್ನು ಬರೆಯಿಸಿ ಇನ್ನೆಂದೂ ಹಾಗೆ ಮಾಡುವುದಿಲ್ಲವೆಂದು ಸ್ಥಿರಪಡಿಸಿ ತ್ರಿಪುರಾಂತಕ ದೇವರ ಗುಡಿಯಲ್ಲಿ ನೀರನ್ನು ಕುಡಿಯುವನು. ಮೋರಿಗೆರೆ ಪರಿಸರದಲ್ಲಿ ಕಂಡುಬರುವ ನ್ಯಾಯದ ಉಲ್ಲೇಖ.

**ಪ್ರಾಚೀನ ವಿದ್ಯಾಭ್ಯಾಸ ಕೇಂದ್ರಗಳು**

೧) ಅಗ್ರಹಾರ

೨) ದೇವಸ್ಥಾನ ಅಥವಾ ಮಠ

೩) ಬ್ರಹ್ಮಪುರಿ

೪) ಘಟಕಸ್ಥಾನ

ಅಗ್ರಹಾರವನ್ನು ದಾನವಾಗಿ ಪಡೆದ ಬ್ರಾಹ್ಮಣರೇ ಮಹಾಜನಗಳು. ಅವರೇ ಆ ಅಗ್ರಹಾರದ ಒಡೆಯರು. ಅಗ್ರಹಾರಗಳಲ್ಲಿ ಹೆಚ್ಚಾಗಿ ಬ್ರಾಹ್ಮಣರೇ ಇರುವುದು. ಹರಿಹರನ ನಂಬಿಯಣ್ಣನ ರಗಳೆಯಲ್ಲಿ ನಂಬಿಯಣ್ಣನು ತಿರುವೆಣ್ಣೆ ನೆಲ್ಲೂರಿನ ಮಹಾಜನಾಂಗಗಳನ್ನು ಕರೆಯಿರಿ ಎಂದು ಆಜ್ಞೆ ಇತ್ತಾಗ, ಆ ಊರಿನ ಬ್ರಾಹ್ಮಣರು ಮಾತ್ರ ಬಂದು ನಿಲ್ಲುವರು, ಈ ಮಹಾ ಜನಾಂಗಗಳ ನೀರುಗುಂದ, ಕುರುವತ್ತಿ, ಪೊಳಲು, ಮಾಂಗೊಳ, ಚಿಂಗಟೇರ, ಕುಮಾರಗುಂಟೆ, ಬಾಳ್ಗುಳಿ, ಪೊಸವಾಡಂಗಿಲೆಗಳಲ್ಲಿ ಕಂಡುಬರುವರು ವಾಸಿಸುವ ಭಾಗವೇ ಬ್ರಹ್ಮಪುರಿ, ಇವುಗಳ ಸಂಖ್ಯೆ ಕಡಿಮೆ. "ಮೋರಗೆರೆ" ಗ್ರಾಮಇದ್ದಕ್ಕೆ ಉದಾಹರಣೆ. ವಿದ್ಯಾಭ್ಯಾಸ ಎರಡು ಕಡೆಯಲ್ಲಿ ಒಂದೇ ರೀತಿಯಾಗಿತ್ತು.[೨] ಘಟಕಾಸ್ಥಾನಕ್ಕೆ ಉದಾಹರಣೆ ದೊರಕಿಲ್ಲ.

ಇಂದು ಮೋರಿಗೆರೆಯಲ್ಲಿ ಹಿಂದೆ ಇದ್ದಂತಹ ಶಿಕ್ಷಣ ಪದ್ಧತಿ ಬದಲಾಗಿ, ಆಧುನಿಕ ಯುಗದ ಶಿಕ್ಷಣ ವ್ಯವಸ್ಥೆ ಜಾರಿಯಲ್ಲಿದೆ.

**ಸಂಗೀತ**

ಮೋರಿಗೆರೆಯಲ್ಲಿ ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಕಾಣುವ ಅಂಶ ಎಂದರೆ ಸಂಗೀತ. ಸಂಗೀತ ಎಂದರೆ ಮನಸ್ಸಿಗೆ ಮುದನೀಡುವ, ಬೇಜಾರವನ್ನು ಹೋಗಲಾಡಿಸಿ ಮನಸ್ಸಿನಲ್ಲಿ ಆನಂದ ಉಂಟುಮಾಡುವ ಸಂಗೀತದ ರುಚಿಯನ್ನು ಮೋರಿಗೆರೆಯಲ್ಲಿ ಕಾಣಬಹುದು. ಅದರಲ್ಲಿ ಈಶ್ವರೆ ಮೋರಿಗೆರೆ ಮತ್ತು ವೀರಯ್ಯ ಮೋರಿಗೆರೆ[೩]ಯವರು ತಬಲ ಬಾರಿಸುವುದರಲ್ಲಿ ಸಿದ್ಧಹಸ್ತರು. ತಳಕಲ್ಲು ಹಾಗೂ ಗದಗಿನ ಪಂಚಾಕ್ಷರಿಗವಾಯಿಗಳ ಶಿಷ್ಯರಾದ ಇವರು ನಾಟಕ ರಂಗದಲ್ಲಿ ಮತ್ತು ಸಂಗೀತ ಕಾರ್ಯಕ್ರಮಗಳಲ್ಲಿ ಖ್ಯಾತಿಯನ್ನು ಪಡೆದಿದ್ದಾರೆ. ದಿವಂಗತ ಚಿಂತರಪಳ್ಳಿಯ ಶೇಷಾದ್ರಿಯವರು ಸಂಗೀತ ಶಾಲೆಯನ್ನು ತೆರದ್ದಿದ್ದರು. ಪ್ರಸಿದ್ಧ ನಾಟಕಗಳನ್ನು ರಚಿಸಿ ಪ್ರಕಟಿಸಿದ್ದಾರೆ.

ಪಂಚಾಕ್ಷರಿಗವಾಯಿಗಳ ಶಿಷ್ಯರಾದ ಇವರು ಹಿಂದೂಸ್ತಾನಿ ಸಂಗೀತದಲ್ಲಿ ಪಾಂಡಿತ್ಯಗಳಿಸಿದವರು. ಅನೇಕ ನಾಟಕಗಳನ್ನು ಆಡಿಸಿ ಅದರಲ್ಲಿ ತಮ್ಮ ಹಾರ್ಮೋನಿಯಂ ಕೈಚಳಕವನ್ನು ತೋರಿಸಿದ್ದಾರೆ. ಕಾಶಿನಾಥ ಶಾಸ್ತ್ರಿ ಹಳೇ ಹಗರಿಬೊಮ್ಮನಹಳ್ಳಿಯವರು ಉತ್ತಮ ಪಿಟೀಲುವಾದಕರು. ಧಾರ್ಮಿಕಕ್ಕೆ ಸಂಬಂಧಿಸಿದಂತೆ ಅನೇಕ ಸಂಗೀತ ಕಾರ್ಯಕ್ರಮಗಳನ್ನು ನಡೆಸಿದ್ದಾರೆ.

**ಕೋಲಾಟದ ಪದಗಳು**

ಬಳ್ಳಾರಿ ಜಿಲ್ಲೆಯಲ್ಲಿ ಅನೇಕ ಜಾತ್ರೆಗಳು ನಡೆಯುತ್ತವೆ. ಪ್ರಮುಖ ಜಾತ್ರೆಗಳಿಗೆ ಸುತ್ತ-ಮುತ್ತಲಿನ ಪ್ರತಿಯೊಂದು ಹಳ್ಳಿಯಿಂದ ಸಾಮಾನ್ಯವಾಗಿ ಒಂದೊಂದು ಕೋಲಾಟದ ತಂಡ ಹೋಗುತ್ತಿದೆ. ಹೀಗಾಗಿ ಕೋಲಾಟ ಇಲ್ಲಿ ಜನಪ್ರೀಯವಾಗಿದೆ. ಕೋಲು ಹಾಕುತ್ತ ಲಯಕ್ಕೆ ಸರಿಯಾಗಿ ಪದಗಳನ್ನು ಹಾಡುವುದೇ ಕೋಲಾಟದ ಪದಗಳಾಗಿವೆ. ಇಲ್ಲಿ ವಸ್ತು ವೈವಿಧ್ಯತೆಗಳನ್ನು ಕಾಣುತ್ತೇವೆ. ಅಂದರೆ ಮೋರಿಗೆರೆಯಲ್ಲಿ ಕೋಲಾಟ ಇದ್ದ ಬಗ್ಗೆ ಜನಪದರ ಹಾಡಿನ ಮುಖಾಂತರ ಕಾಣಬಹುದು.

"ನಾಗರಹಾವು ಮೋರಿಗೆರೆ ದೋಳಿನ ಕೊಂಡಿ
ಸಕ್ರಳ್ಳಿವ್ಯಾಖ್ಯೆಕ್ಕೆ ಗುದ್ದಾಡ್ದಾರೆ ಕ್ಯಾಡ್ಗೆಳ್ಳೇರ
ಬೆಂತಿಬಾಳ ಚಿಂತ್ರಪಳ್ಳಿ ಸೊಂಪೈತ್ರಿ ಹಂಪಾಪಟ್ಣ
ತಂತಿ ನಡಸಾರದರಣ್ಣಾ ಪರಾಂಗ್ಯಾರು.

ಇಲ್ಲಿ ಒಂದೊಂದು ಹಳ್ಳಿಯ ಗುಣಾವಗುಣಗಳನ್ನು ವಿಶೇಪತೆಯನ್ನು ಈ ಕೋಲಾಟದ ಪದದಲ್ಲಿ ಹೇಳಲಾಗಿದೆ.

**೪.೨. ಆರ್ಥಿಕ ಸ್ಥಿತಿಗತಿ :**

ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆ ಹೀಗಿದೆ. ಉತ್ಪಾದನೆ ಪ್ರಾಚೀನ ಕಾಲದಲ್ಲಿಯೂ ವ್ಯವಸಾಯವೂ ಪ್ರಮುಖವಾದ ಉದ್ಯೋಗವಾಗಿತ್ತು. ರೈತರು ಉಳುವ ಭೂಮಿಯನ್ನು ದೇವ ಮಾತೃಕ ಮತ್ತು ನದಿ ಮಾತೃಕಗಳೆಂದು ಹೇಳಬಹುದು. ಮಳೆಯ ನೀರನ್ನು ಆಶ್ರಯಿಸಿ ಬೆಳೆಯುವ ಹೊಲಗಳು ದೇವಮಾತೃಕೆಗಳು, ನದಿ, ಕೆರೆ ಮುಂತಾದವುಗಳನ್ನು ಆಧರಿಸಿರುವ ಹೊಲಗಳು ನದಿ ಮಾತೃಕಗಳು. ಶಾಸನಗಳಲ್ಲಿ ಬೆಧ್ದಿಲೆ-ಬೆದ್ದಲೆ, ಗದ್ದೆ-ಗದ್ದೆ, ಎರೆ-ಕರಿಕೆಯ ಕರಿಯ ಮಣ್ಣಿನ ಭೂಮಿ. ಕಿಸುಕಾಳು-ಕೆಂಗಾಡು-ಕೆಂಗಲು, ವಾಳಲಕೆಯಿ- ಮರಳಭೂಮಿ, ಹರಳೆಕಾಯಿ-ಹರಳುಭೂಮಿ. ಈಗ ಬೆಳೆಯುವ ಬೆಳೆಗಳನ್ನೇ ಹಿಂದಿನಕಾಲದಲ್ಲಿ ಬೆಳೆಯುತ್ತಿದ್ದರು. ಬೆದ್ದಲು ಭೂಮಿಯಲ್ಲಿ ಜೋಳ, ಹತ್ತಿ, ತೊಗರಿ, ಸಜ್ಜೆ, ಗೋಧಿ, ಕೊತ್ತಂಬರೆ, ಹರಳುಗಳು, ನೀರಾವರಿ ಆಶ್ರಯಗಳಲ್ಲಿ ಭತ್ತ, ವೀಳೆದೆಲೆ, ಅಡಿಕೆ, ಬಾಳೆ, ಸಂಪಿಗೆ, ಜಾಜಿ, ಸೇವಂತಿಗೆ ಹೂಗಳನ್ನು ಬೆಳೆಯುತ್ತಿದ್ದರು. ಈ ತೋಟಗಳಲ್ಲಿ ಬಾವಿಗಳು ಇರುತ್ತಿದ್ದವು. ಮೋರಿಗೆರೆ ಪರಿಸರದಲ್ಲಿ ಬರುವ ಬಾಗಳಿ

ಕೆರೆಯನ್ನು ನಿರ್ಮಿಸಲು ೨೦೦೦ ಹೊನ್ನು ಖರ್ಚಾಯಿತೆಂದು ಒಂದು ಕಂಚಿನ ಪತ್ರದಲ್ಲಿ ಹೇಳಿದೆ. ಬಾಗಳಿಯ ಒಂದು ಶಾಸನದಲ್ಲಿ ಬೂದಗೂಳ್‌ನ್ನು ಬಳಿಯರ ಬಾದಮ್ಮನೆಂಬುವ ಜೈನ ಸನ್ಯಾಸಿಗೆ ಊರಿನವರು ಕೊಡುವರು. ಅದನ್ನು ಸನ್ಯಾಸಿಯು ಮರಳಿ ಕೆರೆಯ ದುರಸ್ತಿಗಾಗಿ ಕೊಟ್ಟದ್ದು ಗೊತ್ತಾಗುವುದು. ರೈತರು ಬೆಳೆದ ಬೆಳೆಯ ಹತ್ತನೇ ಒಂದು ಭಾಗವನ್ನು ಹೊಲದ ಒಡೆಯರಿಗೆ ಕೊಡುತಿದ್ದರು ಎಂಬುದು ತಿಳಿದುಬರುತ್ತದೆ.

**ವ್ಯಾಪಾರ**

೧) ಮೇದರು, ತೆಲ್ಲಿಗರು

೨) ಉಗುರ ಮೂನೂರ್ವರು

೩) ವರ್ತಕರ ಶ್ರೇಣಿ

**ಸಾಗಾಣಿಕೆ ಸೌಕರ್ಯಗಳು**

ವ್ಯಾಪಾರವು ಮುಖ್ಯವಾಗಿ ನೆಲ, ಜಲಗಳಲ್ಲಿ, ಎತ್ತಿನಬಂಡಿ, ಕತ್ತೆ, ಕೋಣ, ಕುದುರೆ ಮುಂತಾದ ಪ್ರಾಣಿಗಳ ಮೇಲೆ ಜರುಗುತ್ತಿತ್ತು. ಭಾರಕಡಿಮೆ ಇರುವ ವಸ್ತಗಳನ್ನು ಜನರು ತಲೆಹೊರೆಗಳಿಂದ ಸಾಗಿಸುತ್ತಿದ್ದರು. ಎಣ್ಣೆಯನ್ನು ಕೊಡಗಳಲ್ಲಿತುಂಬಿಹೊತ್ತು ಮಾರುತ್ತಿದ್ದರು.

ಸಣ್ಣಹಳ್ಳಗಳನ್ನು ದೊಡ್ಡನದಿಗಳನ್ನು ದಾಟುವುದಕ್ಕೆ 'ಕಡಹು'ಗಳೆಂದು ಕರೆಯುತ್ತಿದ್ದರು. ಇಂತಹ ಸ್ಥಳಗಳಲ್ಲಿ ದೋಣಿ, ಹರಿಗೋಲು, ತೆಪ್ಪಗಳಲ್ಲಿ ಸಾಮಾನುಗಳನ್ನು ಸಾಗೆಸುತ್ತಿದ್ದರು. ಇಂತಹ ವ್ಯವಸ್ಥೆಯನ್ನು ಮೋರಿಗೆರೆ ಪರಿಸರದಲ್ಲಿತ್ತು ಎನ್ನುವುದು ಉಲ್ಲೇಖ.

**ಉದಾ :** ೧) ಮೊದಲಘಟ್ಟ

೨) ಹಿರೇಕುರುವತ್ತಿ

೩) ಕಡತಿ

೪) ಹೊಸೂರು

೫) ನಿಟ್ಟೂರು ಬಸಾಪುರ

೬) ಹರವಿ

**ಸುಂಕ(ತೆರಿಗೆ)**

ಮೋರಿಗೆರೆ ಪರಿಸರದಲ್ಲಿ ಸುಂಕ ಅಥವಾ ತೆರಿಗೆ ಪದ್ಧತಿಯನ್ನು ಈ ಕೆಳಗಿನಂತ ಕಾಣಬಹುದು. ಚಕ್ರವರ್ತಿಯ ಮಹಾಮಂಡಳೇಶ್ವರನ ಹಾಗಾ ಮಹಾಸಮಂತರ ಮೂಲ ಆದಾಯ ವಿವಿಧ ವಸ್ತುಗಳ ಮೇಲೆ ಹಾಗೂ ವೃತ್ತಿಗಳ ಮೇಲೆ ಸುಂಕವನ್ನು(ತೆರಿಗೆ) ಹಾಕುತ್ತಿದ್ದುದನ್ನು ಶಾಸನಗಳು ನಿರೂಪಿಸಿವೆ. ಸುಂಕವನ್ನು ಆಕರಿಸುವದಕ್ಕೆ ಅಧಿಕಾರಿಗಳ

ಬೃಹತ್ ಜಾಲವೇ ಇರುತ್ತಿತ್ತು. ಚಕ್ರವರ್ತಿಯು ಹಾಕಿದ ಸುಂಕವನ್ನು ಸಂಗ್ರಹಿಸಲು ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕರು ಇರುತ್ತಿದ್ದರು. ಇಂಥ ಅಧಿಕಾರಿಗಳ ಕೆಳಗಡೆ ಸುಂಕದ ದಂಡನಾಯಕರು ಸುಂಕದ ಮಹಾಸಾಮಂತರು ಇರುತ್ತಿದ್ದರು. ಗುಡಿಹಳ್ಳಿಯ ಶಾಸನ[೯]ದಲ್ಲಿ ಸುಂಕದ ಮುಖ್ಯ ಅಧಿಕಾರಿಯಿಂದ ಹಿಡಿದು ಪೂರ್ತಿ ಕೆಳಗಿನ ಸಣ್ಣ ಅಧಿಕಾರಿಯವರೆಗೆ ಇದ್ದವರ ಬಗ್ಗೆ ಮಾಹಿತಿನ್ನೊದಗಿಸುತ್ತದೆ. ಇದರಿಂದ ಅಂದಿನ ಆಡಳಿತ ಪದ್ಧತಿಯ ವ್ಯವಸ್ಥೆಯೂ ಗೊತ್ತಾಗುತ್ತದೆ. ಗುಡಿಹಳ್ಳಿ ೧೧೧೨, ಡಿಸೆಂಬರ್ ೮೦ರ ಶಾಸನ[೬]ದಲ್ಲಿ ಆಡಳಿತದ ವಿಲೋಮ ಪದ್ಧತಿಯನ್ನು ಸ್ಪಷ್ಟವಾಗಿ ಹೀಗೆ ಹೇಳಲಾಗಿದೆ.

**ಅಂದು ಜಾರಿಯಲ್ಲಿದ್ದ ತೆರಿಗೆಗಳು**

೧) ಕತ್ತವರಿವಣ – ಚಿಪ್ಪಿಗರ ಮೇಲೆ ಹಾಕುತ್ತಿದ್ದ ತೆರಿಗೆ
೨) ಕಾಣಿಕೆ – ರಾಜಇಲ್ಲವೆ ಹಿರಿಯ ಅಧಿಕಾರಿ ಬಂದಾಗ ಕೊಡಬೇಕಾದುದು
೩) ಕುಳಿಯ ಸುಂಕ – ತೋಟದ ಬಾವಿಯ ಮೇಲೆ ಹಾಕುತ್ತಿದ್ದ ಸುಂಕ
೪) ಕೊಡತಿವಣ – ಬಡಗಿ, ಕಮ್ಮಾರರ ಮೇಲೆ ಹಾಕುವ ಸುಂಕ
೫) ತಳಭಂಡದ ಸುಂಕ – ವ್ಯಾಪಾರ ಸಾಮಾಗ್ರಿಗಳ ಮೇಲಿನ ಸುಂಕ
೬) ಗಾಣದತೆರೆ – ಗಾಣಗಳ ಮೇಲಿನ ಸುಂಕ
೭) ಮನೆದೆರೆ – ಮನೆಗಂದಾಯ
೮) ತರರಿ ಸುಂಕ – ತಳವಾರನ ಜೀವಿಸಲು ವ್ಯಾಪಾರಿಗಳು ಕೊಡತಕ್ಕ ಸುಂಕ

ಪ್ರಾಚೀನ ಕಾಲದಲ್ಲಿ ಮೋರಿಗೆರೆ ಪರಿಸರದಲ್ಲಿದ್ದ ತೆರಿಗೆ ಪದ್ಧತಿಗಳನ್ನು ತಿಳಿದುಕೊಳಬಹುದು.

**ನಾಣ್ಯಪದ್ಧತಿ**

ನಾಣ್ಯಗಳನ್ನು ಟಂಕಿಸುವ ಸ್ಥಳಗಳಿಗೆ "ಕಮ್ಮಟ" ಅಥವಾ ಅಚ್ಚಿನ "ಟಂಕಸಾಲೆಗಳೆಂದು[೭]" ಕರೆಯುತ್ತಿದ್ದರು. ಅಕ್ಕಸಾಲಿಗರನ್ನು ಅರಸರು ಈ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು. ಉದಾಹರಣೆಗೆ : ಬಳ್ಳಾರಿಜಿಲ್ಲೆಯ ಕೊಟ್ಟತ್ತೊಣೆಯಲ್ಲಿ ಕುಮಾರಸ್ವಾಮಿ ದೇವಸ್ಥಾನವಿದ್ದಿತು. ಆ ದೇವರ ಆಶ್ರಯದಲ್ಲಿದ್ದ ಕಮ್ಮಟದಲ್ಲಿ ನವಿಲು ಮುದ್ರೆಯುಳ್ಳ ನಾಣ್ಯಗಳನ್ನು ಟಂಕಿಸುತ್ತಿದ್ದರು. ಮೋರಿಗೆರೆ ಪರಿಸರದಲ್ಲಿ ಬರುವ ಸೊನ್ನದಲ್ಲಿ ನಾಣ್ಯಗಳನ್ನು ಟಂಕಿಸುವ ಟಂಕಶಾಲೆಗಳಿದ್ದವು. ಎಂದು ತಿಳಿದುಬರುತ್ತದೆ. ಹರಪನಹಳ್ಳಿಯಲ್ಲಿ ೧೦$^{\circ}$/$_{೨}$ ಆಣೆ ಒರೆ ತೂಕಯಿದ್ದದು ಗೊತ್ತಾಗುವುದು.

| | |
|---|---|
| ೧ ಗದ್ಯಾಣ | = ಹತ್ತು ಪಣ |
| ೧ ಪಣ | = ಎರಡು ಅಡ್ಡ |
| ೧ ಪಣ | = ನಾಲ್ಕು ಹಾಗ |
| ೧ ಪಣ | = ಹದಿನಾರು ವೀಸ |
| ೩/೪ ಪಣ | = ಮುಪ್ಪಾಗ |

ನಾಣ್ಯಗಳಲ್ಲಿ ಹೆಚ್ಚು ಬಳಕೆಯಲ್ಲಿ ಕಾಣುವುದು ಗದ್ಯಾಣ ಅಥವಾ ಪೊನ್ ಎಂಬ ನಾಣ್ಯ ಡಾ॥ ಅಲ್ತೇಕರ ಪ್ರಕಾರ ಒಂದು ಗದ್ಯಾಣದ ತೂಕ ಸುಮಾರು ೯೬ ಗ್ರಾಂ, ಡಾ॥ಅಪ್ಪಾದೊರೈ ಪ್ರಕಾರ ಸುಮಾರು ೬೩ ಗ್ರಾಂ, ಕೋಗಳಿ ಶಿವಕೋಟಾಚಾರ್ಯರ ವಡ್ಡರಾಧನೆ ಗ್ರಂಥದಲ್ಲಿ 'ದ್ರಮ್ಮ' ಮತ್ತು 'ದೀನಾರ ' ಎಂಬನಾಣ್ಯಗಳ ಹೆಸರು ಬರುವವು. ಆದರೆ ಶಾಸನಗಳಲ್ಲಿ 'ದೀನಾರ' ಬಗ್ಗೆ ತಿಳಿಸಿಲ್ಲ.

ಮೋರಿಗೆರೆ ಪರಿಸರದಲ್ಲಿ ಬರುವ ಕೋಗಳಿಯ ಕ್ರಿ.ಶ.೯೭೨ ಡಿಸೆಂಬರ್ ೨೩ರ ಶಾಸನದಲ್ಲಿ 'ಗದ್ಯಾಣ' ನಾಣ್ಯದ ಬಗೆ ಉಲ್ಲೇಖ ಸಿಗುತ್ತದೆ.[೮]

ಮೈಲಾರದ ಕ್ರಿ.ಶ. ೧೦೪೬ರ ಶಾಸನದಲ್ಲಿ 'ಪಣ' ನಾಣ್ಯದ ಬಗ್ಗೆ ಉಲ್ಲೇಖ ದೊರೆಯುತ್ತದೆ.[೯]

## ಅಳತೆ ಮತ್ತು ತೂಕಗಳು

ಹೊಲಗಳನ್ನು ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ ಅಳೆಯುತ್ತಿದ್ದರು. ಎರಡು ಸಲಗೆಗದ್ದೆ, ಇಕ್ಕಂಡುಗ ಬೆದ್ದಲ್, ಹೊಲಗಳನ್ನು ಅಳೆಯಲು ಆಯಾ ಊರುಗಳ ಹೆಸರಿನಲ್ಲಿ ಅಳತೆಗೋಲುಗಳನ್ನು ರಚಿಸಿ ಗುಡಿಗಳಲ್ಲಿಟ್ಟಿದ್ದು ಗೊತ್ತಾಗುವುದು.

ಉದಾ : ಬಳ್ಳಾರಿ ತಾಲೂಕು ಕುರುಗೋಡು ಊರಲ್ಲಿ ಹದಿನೆಂಟು ಗೇಣಿನ ಕೋಲನ್ನು ಅಳತೆಗೆ ಉಪಯೋಗಿಸಲು ಅರಸ ಶಾಸನ[೧೦]ವನ್ನು ಮಾಡಿದ್ದನು. ಮೋರಿಗೆರೆ ಪರಿಸರದಲ್ಲಿ ಕೂಡ ಅಳತೆ ಗೋಲುಗಳನ್ನು ಕಾಣಬಹುದು.

ತೂಕದ ಬಗ್ಗೆ ಸರಿಯಾದ ಮತ್ತು ಹೆಚ್ಚು ವಿವರಗಳು ದೊರಕಿಲ್ಲ. ರಾಜಾದಿತ್ಯನ ಗಣಿತ ವ್ಯವಹಾರದಲ್ಲಿ ಕಂಡುಬರುವ ಕೆಲಮಾಹಿತಿಗಳು ಈ ಜಿಲ್ಲೆಯ ಪೂರ್ವಜರು ಬರೆದಿಟ್ಟ ಟಿಪ್ಪಣಿಗಳಲ್ಲಿ ದೊರಕುವವು. ಅವುಗಳನ್ನು ಈ ಕೆಳಗೆ ಕೊಡಲಾಗಿದೆ.

೧ ಖಂಡಾಗ – ೪ ಪಂಚಕ
೧ ಪಂಚಕ – ೫ ಕೊಳಗ
೧ ಕೊಳಗ – ೪ ಬಳ್ಳ
೧ ಬಳ್ಳ – ೪ ಮಾನ
೧ ಮಾನ – ೪ ಸೊಲ್ಲಿಗೆ
೧ ಸೊಲ್ಲಿಗೆ – ೪ ಗದ್ದಿಗೆ
೧ ಭಾರ – ೨೦ ತೊಲ
೧ ತೊಲ – ೫ ಬೀಸಗೆ
೧ ಬೀಸಗೆ – ೨೦ ಪಲ
೧ ಪಲ – ೪ ಕರ್ಷ
೧ ಕರ್ಷ – ೪ ಸುವರ್ಣ

## ೪.೩ ಧಾರ್ಮಿಕ ಆಚರಣೆಗಳು

ಧಾರ್ಮಿಕ ಆಚರಣೆಗಳು ಮತ್ತು ಧರ್ಮ ಸಮಾಜದ ಅವಿಭಾಜ್ಯ ಅಂಗ, ಬೇರೆ ಬೇರೆ ಮತಧರ್ಮಗಳು ಅಂದಿನ ಸಮಾಜವನ್ನು ಪೋಷಿಸುತ್ತಾ ಮತ್ತು ಸಮಾಜದಿಂದ ಪೋಷಿಸಲ್ಪಡುತ್ತಾ ಬೆಳೆದು ಬಂದುದನ್ನು ಎಲ್ಲಾ ಕಡೆಗಳಲ್ಲೂ ನೋಡಬಹುದಾಗಿದೆ. ಹೀಗೆ ಮೋರಿಗೆರೆಲ್ಲಿ ಆಳ್ವಿಕೆ ಮಾಡಿದ ಕಲ್ಯಾಣಿ ಚಾಲುಕ್ಯರು ಹೊಸದಾಗೆ ಧಾರ್ಮಿಕ ಕ್ಷೇತ್ರದಲ್ಲಿ ಯಾವ ಬದಲಾವಣೆಯನ್ನು ತರಲಿಲ್ಲ. ಮತ್ತು ತರುವಂತ ಇಚ್ಛೆಯನ್ನು ಅವರು ಹೊಂದಿರಲಿಲ್ಲ. ಅಂದು ಮೋರಿಗೆರೆಯುಲಿದ್ದ ಜನರು ಮೂಲತಃ ಶೈವಧರ್ಮವರಾಗಿದ್ದರು. ಹಾಗೂ ಎಲ್ಲಾಧರ್ಮಗಳ ಬಗ್ಗೆ ಉದಾರವಾದ ಪ್ರೋತ್ಸಾಹ ಕೊಟ್ಟಿದ್ದರು. ಶೈವ, ವೈಷ್ಣವ ಮತ್ತು ಶಾಕ್ತೆಯ ಪಂಥ ಮತ್ತು ಧರ್ಮಗಳಿಗೆ ವಿಶೇಷ ಕಾಳಜಿ ಕೊಟ್ಟಿದ್ದನ್ನು ತಿಳಿಯಬಹುದಾಗಿದೆ. ಅನೇಕ ಧಾರ್ಮಿಕ ಆಚರಣೆಗಳಿಗೂ ಪ್ರೋತ್ಸಾಹ ಕೊಟ್ಟಿರುವುದನ್ನು ಕಾಣಬಹುದು. ಮೋರಿಗೆರೆಯ ೧೧೪೫ ಅಕ್ಟೋಬರ್ ೨೮ ರ ಶಾಸನ[೧೧]ದಲ್ಲಿ ತ್ರೈಲೋಕ್ಯಮಲ್ಲನನ್ನಿನೊಳಂಬ ಪಲ್ಲವ ಪೆರ್ಮಾನಡಿಗಳ ಪಾದಪದ್ಮೋಪ ಜೀವಿಗಳಾಗಿ ಲೆಂಕ ಸಾರ್ಸಿವರು ಇದ್ದರು. ಇವರು ಆತನ ರಾಜ್ಯದ ಸ್ಥಂಭಗಳೆಂತೆ ಇದ್ದರೆಂದು ಶಾಸನ ವರ್ಣಿಸಿದೆ. ಮೋರಿಗೆರೆಯಲ್ಲಿ ಇವರು ಲೆಂಕೇಶ್ವರ ದೇವಾಲಯವನ್ನು ಕಟ್ಟಿಸುತ್ತಾರೆ. ಅಂದರೆ ಶೈವಧರ್ಮಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದರು ಎಂದು ತಿಳಿದುಬರುತ್ತದೆ.

ಆಧುನಿಕ ಕಾಲದಲ್ಲಿ ಮೋರಿಗೆರೆಯಲ್ಲಿ ಅನೇಕ ಜಾತಿ-ಮತ- ಪಂಥಗಳು ಇವೆ. ಆದರೆ ಇಡೀ ಊರಿನ ಜನರು ಏಕತೆಯಿಂದ ಆಚರಿಸುವ ಧಾರ್ಮಿಕ ಆಚರಣೆ ಎಂದರೆ ಕಲ್ಲೇಶ್ವರ ಜಾತ್ರೆ. ಈ ಜಾತ್ರೆಯಲ್ಲಿ ಎಲ್ಲಾ ವರ್ಗದವರು ಕೂಡಿಕೊಂಡು ಕಲ್ಲೇಶ್ವರ ಜಾತ್ರೆಯನ್ನು ಮಾಡುತ್ತಾರೆ. ಈ ಜಾತ್ರೆ ಯುಗಾದಿ ಹಬ್ಬದಲ್ಲಿ ಆಚರಿಸುತ್ತಾರೆ. ಈ ಜಾತ್ರೆಯಲ್ಲಿ ಒಂದು ರಥವನ್ನು ಎಳೆಯುತ್ತಾರೆ, ಈ ರಥವನ್ನು ಒಂದುವಾರ ಮುಂಚಿತವಾಗಿ ತಯಾರಿಗೊಳಿಸಬೇಕು. ಮೋರಿಗೆರೆಯಲ್ಲಿ ಅತಿಹೆಚ್ಚು ಪ್ರಾಬಲ್ಯ ಹೊಂದಿದ ಜನಾಂಗ ಎಂದರೆ ಪಂಚಮಶಾಲಿಯವರು.

ರಥವನ್ನು ಶೃಂಗಾರ ಮಾಡುವವರು ಹರಿಜನರು, ರಥದ ಗಾಲಿಗಳಿಗೆ ಎಣ್ಣೆ ಬಣ್ಣವನ್ನು ಹಾಕುವವರು ವಾಲ್ಮೀಕಿ ಜನಾಂಗ, ಜೊತೆಗೆ ರಥದ ಗಾಲಿಗಳನ್ನು ಹೊರಗೆ ಹಾಕುವವರು, ನಂತರ ರಥ ಎಳೆಯುವ ದಿನ ಹರಿಜನರ ಮನೆಯಿಂದ ಮೊದಲು ಕಳಸ ಬರಬೇಕು. ನಂತರ ಲಿಂಗಾಯುತರಲ್ಲಿ ಬಣಕಾರ ಎಂಬುವರು ಪೂಜೆ ಸಲ್ಲಿಸಿದ ನಂತರ ರಥವನ್ನು ಎಳೆಯುತ್ತಾರೆ. ಇದು ಮೋರಿಗೆರೆಯಲ್ಲಿ ಆಚರಿಸುವ ಒಂದು ವಿಶಿಷ್ಟ ಧಾರ್ಮಿಕ ಆಚರಣೆ.

ಇಂಥಹ ಧಾರ್ಮಿಕ ವಿಧಿಗಳನ್ನು ನಮ್ಮ ಜನಪದರು ತಮ್ಮದೇ ಆದ ವಿಶಿಷ್ಠ ಶೈಲಿಯಲ್ಲಿ ಆಚರಿಸುತ್ತಿದ್ದರು ಎಂದು ಹೇಳಬಹುದು. ಇದು ಆ ದೇವರುಗಳ ಬಗೆಗಿರುವ ಅಪಾರ ಭಕ್ತಿ ಹಾಗೂ ಕಲ್ಪನೆಯನ್ನು ಸ್ಪಷ್ಟಪಡಿಸುತ್ತದೆ. ಇವರ ಬಗೆಗಿನ ಹಲವು ಕಲ್ಪನೆಗಳು ಜನರ ವಿಶಿಷ್ಠ ಮನೋಭಾವವನ್ನು ತಿಳಿಸುತ್ತವೆ. ಹೀಗೆ ಇಂದಿನ ಆಚರಣೆಯ ವಿವರಗಳನ್ನು ಪರಿಶೀಲಿಸಿದರೆ ಅವುಗಳು ಸಾಂಪ್ರದಾಯಕವಾಗಿ ನಡೆದುಕೊಂಡು ಬಂದಿದ್ದಿರಬಹುದೆಂದು ಊಹಿಸಬಹುದಾಗಿದೆ.

ಇಲ್ಲಿನ ಚಾಲುಕ್ಯರು ಶಿಷ್ಟ ಸಂಪ್ರದಾಯವನ್ನು ಬಿಡದೆ ಜಾನಪದ ಬದುಕಿಗೆ ಹತ್ತಿರವಾದ ಸಂಸ್ಕೃತಿಯನ್ನು ಪೋಷಿಸಿ, ಬೆಳೆಸಿದರು. ಇದರಿಂದ ಜನರ ಸಂಘಟನೆ ಅವರಿಗೆ ಸಾಧ್ಯವಾಯಿತು. ಹಾಗೂ ಅನೇಕ ಜಾನಪದ ಸಂಸ್ಕೃತಿಯ ಆಚರಣೆ ಪ್ರಕಾರಗಳು ಉಳಿದು ಬರುವುದಕ್ಕೆ ಇವರು ಕಾರಣರಾಗಿದ್ದಾರೆ.

**೪.೪. ಸಾಮಾಜಿಕ ಸಾಮರಸ್ಯ**

ಬಳ್ಳಾರಿ ಜಿಲ್ಲೆಯಲ್ಲಿ ಶೈವ, ಜೈನ ಹಾಗೂ ವೈಷ್ಣವ ಧರ್ಮಗಳು ಇದ್ದ ಬಗ್ಗೆ ಶಾಸನಗಳು ತಿಳಿಸುತ್ತವೆ. ಧಾರ್ಮಿಕ ವೈಷಮ್ಯಗಳು ಇರಲಿಲ್ಲ. ಒಂದು ಧರ್ಮದವರು ಇನ್ನೊಂದು ಧರ್ಮದ ದೇವಾಲಯಗಳಿಗೆ ದಾನ-ದತ್ತಿಯನ್ನು ಬಿಟ್ಟಿದ್ದಾರೆ. ಹೀಗಾಗಿ ಸರ್ವಧರ್ಮ ಸಮನ್ವಯವನ್ನು ಇಲ್ಲಿ ಕಾಣುತ್ತೇವೆ.

ಮೋರಿಗೆರೆ ಪರಿಸರವನ್ನು ಸಾಮಾಜಕ ಸಾಮರಸ್ಯ ದೃಷ್ಟಿಯಿಂದ ಪರಿಶೀಲಿಸಿದರೆ ಈ ಪ್ರದೇಶದಲ್ಲಿ ಧಾರ್ಮಿಕತೆಗಿಂತ ವೈವಿಧ್ಯತೆ ಇತ್ತೆಂದು ಇಂದಿನ ಪ್ರಸ್ತುತದ ಚಿತ್ರಣದಿಂದ ತಿಳಿಯಬಹುದು. ಇಂತಹ ವೈವಿಧ್ಯತೆಯಿಂದ ಕೂಡಿದ ಶಿಷ್ಟಮತ ಧಾರ್ಮಿಕವೂ ಮತ್ತು ಜಾನಪದ ಧಾರ್ಮಿಕ ಪರಂಪರೆಯೂ ಸಹಬಾಳ್ವೆಯಿಂದ ಬಾಳಿದ್ದನ್ನು ನೋಡಬಹುದು.

ಇಂದಿನ ಮೋರಿಗೆರೆಯಲ್ಲಿರುವ ಹಲವು ವರ್ಗಗಳನ್ನು ಮತ್ತು ಜಾತಿ-ಮತ ಪಂಥಗಳನ್ನು ನೋಡಿದರೆ ಅವರಲ್ಲಿ ಏಕತೆ ಸಹಬಾಳ್ವೆ ಎದ್ದು ಕಂಡುಬರುತ್ತದೆ. ಇಲ್ಲಿರುವ ಜಾತಿಗಳು ಮೋರಿಗೆರೆಯಲ್ಲಿ ನಡೆಯುವ ಪ್ರತಿಯೊಂದು ಜಾತ್ರೆ, ಉತ್ಸವ ಹಬ್ಬಗಳಲ್ಲಿ ಎಲ್ಲರು ಕೂಡಿಕೊಂಡು ಸಂತೋಷದಿಂದ ಆಚರಿಸುತ್ತಾರೆ. ಯಾವುದೇ ರೀತಿಯ ವರ್ಗ ವೈಷಮ್ಯವಾಗಲಿ, ಧಾರ್ಮಿಕ ವೈಷಮ್ಯವಾಗಲಿ ಇಲ್ಲಿ ಕಾಣುವುದಿಲ್ಲ. ಮೊದಲೇ ಹೇಳಿದಂತೆ ವೈವಿಧ್ಯತೆಯಲ್ಲಿ ಏಕತೆಯನ್ನು ಕಾಣಬಹುದು.

## ಅಡಿಟಿಪ್ಪಣಿಗಳು

೧ ಸದಾಶಿವಪ್ಪ .ಕುಂ.ಬಾ - ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ - ೧೯೯೦-ಪು-೪೯

೨ ಅದೇ-೧೯೯೦ ಪು-೪೯

೩ ಪರಮೇಶ್ವರಯ್ಯ ಸೊಪ್ಪಿನಮಠ -ಹಗರಿಬೊಮ್ಮನಹಳ್ಳಿ ತಾಲೂಕುದರ್ಶನ-೨೦೦೫-ಪು-೬೦.

೪ ಸದಾಶಿವಪ್ಪ .ಕುಂ.ಬಾ - ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ-೧೯೯೦ ಪು-೫೧

೫ ನಾಗಯ್ಯ .ಜೆ.ಎಂ. - ಬಳ್ಳಾರಿ ಜಿಲ್ಲೆಯ ಶಾಸನಗಳು-೧೯೯೧ -ಪು -೬೨

೬ ಅದೇ-೧೯೯೧ ಪು - ೬೨

೭ ಸದಾಶಿವಪ್ಪ .ಕುಂ.ಬಾ - ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ-೧೯೯೦ ಪು - ೫೨

೮ ನಾಗಯ್ಯ .ಜೆ.ಎಂ. - ಬಳ್ಳಾರಿ ಜಿಲ್ಲೆಯ ಶಾಸನಗಳು - ೧೯೯೧ -ಪು -೬೦

೯ ಅದೇ-೧೯೯೧- ಪು - ೬೧

೧೦ ಸದಾಶಿವಪ್ಪ .ಕುಂ.ಬಾ ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ-೧೯೯೦ಪು - ೫೩

೧೧ನಾಗಯ್ಯ .ಜೆ.ಎಂ. - ಬಳ್ಳಾರಿ ಜಿಲ್ಲೆಯ ಶಾಸನಗಳು ೧೯೯೧ ಪು - ೩೫

# ಅಧ್ಯಾಯ : ೫

## ಸಮಾರೋಪ

ಪ್ರಪಂಚದಲ್ಲಿಯೇ ಸುಸಂಸ್ಕೃತ ದೇಶವೆಂದು ಹೆಸರಾದ ಭಾರತ ಸಾಂಸ್ಕೃತಿಕ ಕ್ಷೇತ್ರದಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದಿದೆ, ಅದರಲ್ಲಿ ಕರ್ನಾಟಕ ಸಂಸ್ಕೃತಿಯ ಪ್ರಾಚೀನತೆಯನ್ನು ತನ್ನ ಗರ್ಭದಲ್ಲಿರಿಸಿಕೊಂಡು ನಾಡಿನ ಜನತೆಗೆ 'ಕಲೆ ವಾಸ್ತು ಶಿಲ್ಪ'ದ ಸೊಬಗನ್ನು ನೀಡುತ್ತಿದೆ, ಅನೇಕ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟ ಈ ನಾಡು 'ದೇವಾಲಯದ ವಾಸ್ತು ಶಿಲ್ಪದ ತೊಟ್ಟಿಲು' ಎಂದು ಹೆಸರು ಪಡೆದಿದೆ. ವಾಸ್ತುಶಿಲ್ಪದ ಜೊತೆಗೆ ಧರ್ಮಸಮನ್ವಯವನ್ನು ಕಾಪಾಡುವಲ್ಲಿ ಈ ನಾಡು, ನಾಡಿನ ಜನತೆಯ ಮನದಾಳದಲ್ಲಿ ಬೇರೂರಿದೆ. ಇಂತಹ ಪರಂಪರೆಯನ್ನು ಪಡೆದ ಮೋರಗೆರೆ ಹಗರಿಬೊಮ್ಮನಹಳ್ಳಿಯ ಒಂದು ಚಿಕ್ಕ ಗ್ರಾಮವಾಗಿದೆ.

ಮೋರಗೆರೆ ಸಾಂಸ್ಕೃತಿಕ ಅಧ್ಯಯನವನ್ನು ಮಾಡುವಾಗ ಇದಕ್ಕೆ ಸಂಬಂಧಿಸಿದಂತೆ ಸಾಂಸ್ಕೃತಿಕ ಅಂಶಗಳನ್ನು ಕ್ರೋಢೀಕರಿಸಿ, ಅಧ್ಯಯನಕ್ಕೆ ಬೇಕಾಗುವ ಆಕರಗಳನ್ನು ಬಳಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಮೋರಿಗೆರೆ ಗ್ರಾಮದ ಶಾಸನಗಳು ಮತ್ತು ದೇವಾಲಯಗಳಿಗೆ ಮಹತ್ವ ಕೊಡಲಾಗಿದೆ. ಈ ಗ್ರಾಮದಲ್ಲಿ ಇರುವ ಕಲ್ಯಾಣಿ ಚಾಲುಕ್ಯರ ಕಾಲದ ಬಹುತೇಕ ಕುರುಹುಗಳನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಗ್ರಾಮದ ಸಾಂಸ್ಕೃತಿಕ ಇತಿಹಾಸಕ್ಕೆ ಸಂಬಂದ ಪಟ್ಟಂತೆ ಆಕರಗಳನ್ನು ಬಳಸಿಕೊಳ್ಳಲಾಗಿದೆ, ಅಧ್ಯಯನಕ್ಕೆ ಪ್ರಮುಖವಾದ ವಸ್ತುಗಳಾಗಿವೆ, ಇಲ್ಲಿ ದೊರೆಯುವ ಶಾಸನಗಳಿಂದ ರಾಜಕೀಯ ಚರಿತ್ರೆಯನ್ನು ರಾಜರು ನೀಡಿದ ದಾನಗಳಿಂದ ಅಂದಿನ ಸಾಮಾಜಿಕ, ಧಾರ್ಮಿಕ, ಕ್ಷೇತ್ರಗಳಿಗೆ ಅಂದಿನ ರಾಜ ಮನೆತನಗಳ ಕೊಡುಗೆಯು ತಿಳದು ಬರುತ್ತದೆ. ತಾಲ್ಲೂಕಿನ ಗ್ರಾಮದ ಅಧ್ಯಯನಕ್ಕೆ ಸಂಬಂಧಿಸಿದ ಬಿಡಿ ಲೇಖನಗಳ ಜೊತೆಗೆ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ೧ರ ವಿವರಗಳನ್ನು ಬಳಸಿಕೊಂಡು ವಿವರಿಸಲಾಗಿದೆ. ಶಾಸನಗಳಲ್ಲಿ ಶಿಲ್ಪವನ್ನು ಕುರಿತು ಅಧ್ಯಯನ ಮಾಡಲಾಗಿದೆ, ಶಿಲ್ಪಗಳನ್ನು ಸೂಕ್ಷ್ಮವಾಗಿ ಅಭ್ಯಾಸಿಸಿದರೆ ಅಂದಿನ ಸಾಮಾಜಿಕ ಕಳಕಳಿ, ಧಾರ್ಮಿಕ ಸ್ಥಿತಿಗತಿಗಳ ಅಧ್ಯಯನಕ್ಕೆ ಆಕರಗಳಾಗಿವೆ ಎಂಬುದನ್ನು ಮನಗಾಣಬಹುದಾಗಿದೆ.

ಶಾಸನಗಳ ಅಧ್ಯಯನದ ನೆಲೆ ವಿಭಿನ್ನ ಗೊಂಡಾಗ ಇವುಗಳಲ್ಲಿ ಆಡಕವಾಗಿರುವ ಸಾಹಿತ್ಯಿಕ ಅಂಶಗಳಾದ ಛಂದಸ್ಸು, ವರ್ಣನೆ, ಅಲಂಕಾರ, ಚಂಪೂಶೈಲಿಯ ಬಳಕೆಯೂ ವಿಭಿನ್ನವಾಗುವುದು ಗುರುತಿಸಬಹುದು. ಜೊತೆಗೆ ಛಂದಸ್ಸಿನ ಪ್ರಾಚೀನತೆ, ಉಗಮ, ಲಕ್ಷಣ, ಪ್ರಾಸದ ಬಳಕೆ ಶಾಸನ ಬರೆಯುವ ಕವಿ ತನ್ನ ಕಾವ್ಯ ಪ್ರೌಢಿಮಿಯನ್ನು ಶಾಸನದ ಮಿತಿಯೊಳಗೆ ತನ್ನ ತನವನ್ನು ಗುರುತಿಸಿಕೊಳ್ಳುವಲ್ಲಿ ಶಾಸನಗಳು ಮುಖ್ಯವಾಗಿವೆ, ಎನ್ನುವುದನ್ನು ತಿಳಿಯಬಹುದು. ಶಾಸನಗಳು ಮತ್ತು ದೇವಾಲಯಗಳಂತೆ ವೀರಗಲ್ಲುಗಳನ್ನು

ಕಾಣಬಹುದು, ಇವುಗಳನ್ನು ಅಭ್ಯಾಸಿಸಿದಾಗ ಇವು ಅಂದಿನ ಕಾಲ ಮಾನದಲ್ಲಿ ಲೌಕಿಕ ಮತ್ತು ಅಲೌಕಿಕವಾಗಿದ್ದ ಕಟ್ಟಳೆಗಳನ್ನು ತಿಳಿಸುತ್ತಿದ್ದವು. ಬಹುತೇಕವಾಗಿ ಇವು ಅಂದಿನ ಪ್ರಬಲ ವರ್ಗದ ಜನರು ಸಾಮಾನ್ಯ ಜನರನ್ನು ತಮ್ಮ ಕೆಲಸಗಳಿಗಾಗಿ ಅಡಿದಾಳುಗಳಾಗಿ ಮಾಡಿಕೊಂಡಿರುವುದನ್ನು ಪ್ರತಿಬಿಂಬಿಸುತ್ತಿದ್ದವು ಎನ್ನುವುದನ್ನು ತಿಳಿಯಬಹುದು.

ಮುಖ್ಯವಾಗಿ ಇಲ್ಲಿಯ ದೇವಾಲಯಗಳನ್ನು ಗಮನಿಸಿದಾಗ ಇವುಗಳು ವಾಸ್ತುಶಿಲ್ಪದ ಲಕ್ಷಣಗಳನ್ನು ತಿಳಿಸಿದರೆ ಇನ್ನೊಂದು ಕಡೆ ಸಾಮಾಜಿಕವಾಗಿ ಪ್ರಾಬಲ್ಯ ಹೊಂದಿದ ಜನ ವರ್ಗದ ಮೂಲಕ ಸಂಪತ್ತನ್ನು ಕಬಳಿಸುವ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸುತ್ತಿದದ್ದವು, ಎನ್ನುವುದನ್ನು ಊಹಿಸಬಹುದು. ವಾಸ್ತುಶಿಲ್ಪದ ಹಿನ್ನಲೆಯಿಂದ ನೋಡಿದಾಗ ಆ ಪರಿಸರದಲ್ಲಿ ಯಾವ ಧರ್ಮ ಪ್ರಬಲಾಗಿರುತ್ತಿತ್ತೋ ಆ ಧರ್ಮದ ದೇವಾಲಯಗಳು ಹೆಚ್ಚಾಗಿ ಕಂಡುಬರುತ್ತವೆ. ಇಲ್ಲಿಯ ಮೂರ್ತಿಶಿಲ್ಪ ಮತ್ತು ವಾಸ್ತು ಶಿಲ್ಪವನ್ನು ಅಧ್ಯಯನ ಮಾಡಿದಾಗ ಅಧಿಕವಾಗಿ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಪ್ರಭಾವವನ್ನು ಕಾಣಬಹುದು.

ಇತಿಹಾಸ ಕಾಲಕ್ಕೆ ಸಂಬಂಧಿಸಿದಂತೆ ಬಹುಮುಖ್ಯವಾಗಿ ಮೋರಗೆರೆಯ ವಿಶೇಷತೆಯಲ್ಲಿ ದೇವಾಲಯಗಳನ್ನು ಮತ್ತು ಶಾಸನಗಳನ್ನು ಕುರಿತು ಚರ್ಚಿಸಲಾಗಿದೆ. ಶಾಸನಗಳ ಮುಖಾಂತರ ದೇವಾಲಯಗಳಿಗೆ, ಇರುವ ಸಂಬಂಧ ಮುಂತಾದ ಮಹತ್ವದ ಅಂಶಗಳನ್ನು ತಿಳಿಯುವುದರ ಮೂಲಕ ಅಲ್ಲಿಯ ಮೋರಗೆರೆಯ ವಿದ್ಯಾಕೇಂದ್ರದ ಬಗ್ಗೆಯೂ ಸಹ ಚರ್ಚಿಸುತ್ತ ಮೋರಗೆರೆಯ ಅನನ್ಯತೆಯನ್ನು ಗಮನಿಸಲಾಗಿದೆ.

ಪ್ರಸ್ತುತ ಸಂಧರ್ಭದಲ್ಲಿ ದೇವಾಲಯ ಮತ್ತು ಶಾಸನಗಳ ಅವಶ್ಯಕತೆ ಬಹು ಮುಖ್ಯವಾಗಿ ಅಧ್ಯಯನಕಾರರಿಗೆ ಬೇಕಾಗಿದೆ, ಇವುಗಳನ್ನು ಸಂರಕ್ಷಿಸುವ ಕಾರ್ಯ ಭರದಿಂದ ಸಾಗಬೇಕಾಗಿದೆ. ಅವನತಿಯ ಅಂಚಿನಲ್ಲಿರುವ ಶಾಸನ ಮತ್ತು ದೇವಾಲಯಗಳನ್ನು ಸಂರಕ್ಷಿಸದೇ ಇದ್ದರೆ, ಅವುಗಳ ಕಣ್ಮರೆಯಾಗುವ ಸಾಧ್ಯತೆ ಹೆಚ್ಚಿದೆ. ಇಂತಹ ಸಾಲಿನಲ್ಲಿ ಮೋರಿಗೆರಿ ಗ್ರಾಮವು ಒಂದಾಗಿದೆ. ಇಲ್ಲಿನ ಶಾಸನಗಳು, ದೇವಾಲಯಗಳ ಮಹತ್ವವನ್ನು ಗ್ರಾಮಸ್ಥ ಜನರಿಗೆ ತಿಳುವಳಿಕೆ ಮಾಡಬೇಕು, ಅದರ ಮೂಲಕ ಅವುಗಳನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ಪರಿಚಯಿಸುವ ಕೆಲಸ ನಮ್ಮದಾಗಿದೆ. ಇದರಲ್ಲಿ ಸರಕಾರದ ಜವಾಬ್ದಾರಿಯೂ ಇದೆ. ಕಾರಣವೇನೆಂದರೆ ರಾಷ್ಟ್ರೀಯ ಅಂತರಾಷ್ಟ್ರೀಯಾ ಅಧ್ಯಯನದ ನೆಲೆಗಳು ಭಿನ್ನಗೊಂಡು ಇಂದು ಸ್ಥಳ ಸ್ಪರ್ಶಿಯಾದ ಅಧ್ಯಯನಗಳನ್ನು ಕೈಕೊಳ್ಳಲು ಗ್ರಾಮದಲ್ಲಿ ದೊರೆಯುವ ಕುರುಹುಗಳು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ.

ಮೋರಗೆರೆ ಗ್ರಾಮದಲ್ಲಿರುವ ಐತಿಹಾಸಿಕ ಕುರುಹುಗಳು ಜಾಗತೀಕರಣದ ಹಿನ್ನೆಲೆಯಲ್ಲಿ ನಾಶವಾಗುವ ಸಾಧ್ಯತೆ ಹೆಚ್ಚಿದೆ. ಆದ್ದರಿಂದ ಅಲ್ಲಿಯ ಜನರು ಮನೆಯ ಕಟ್ಟಡಗಳ ಸ್ಥಾಪನೆಯಿಂದ ಮನೆಯ ಬುನಾದಿಗಳಿಗೆ ಅಳಿದುಳಿದ ಪ್ರಾಚೀನ ಕುರುಹುಗಳು ಅಡಿಪಾಯಗಳಾಗುವ ಅಪಾಯವಿರುವುದರಿಂದ ಅವುಗಳನ್ನು ರಕ್ಷಿಸಿ, ನಾಡಿನ ಗ್ರಾಮದ

ಸಂಸ್ಕೃತಿಯನ್ನು ಉಳಿಸಿಕೊಳ್ಳುವಂತಹ ಕೆಲಸಗಳು ಮಾಡಬೇಕಾಗಿದೆ. ಮೀರಂಗೇರಿ ಗ್ರಾಮವು ಪ್ರಸಿದ್ಧಿ ಪಡೆದ ಗ್ರಾಮ ಕೆಲವೇ ದಿನಗಳಲ್ಲಿ ನಗರ ಪ್ರದೇಶವಾಗುವ ಎಲ್ಲಾ ಲಕ್ಷಣಗಳು ಕಂಡುಬರುತ್ತವೆ. ಅದನ್ನು ನಾವು ನೀವು ಕಾದುನೋಡಬೇಕು.

## ಅನುಬಂಧಗಳು

೧. ನಕಾಶೆಗಳು

೨. ಆಕರ ಗ್ರಂಥಗಳು

೩. ಛಾಯಾ ಚಿತ್ರಗಳು

೪. ಶಾಸನ ಪಾಠಗಳು

## ಆಕರ ಗ್ರಂಥಗಳು


೧. ಅಪರ್ಣ ಕೂ. ಸ. ದೇವಾಲಯ ಮತ್ತು ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೧೯೯೯.

೨. ಅಣ್ಣಿಗೇರಿ ಎಂ. ಶಾಸನ ಸಾಹಿತ್ಯ ಸಂಚಯ, ಕನ್ನಡ ಸಂಶೋಧನೆ ಸಂಸ್ಥೆ, ಧಾರವಾಡ. ೧೯೯೧

೩. ಕಲಬುರ್ಗಿ ಎಂ.ಎಂ.ಕರ್ನಾಟಕ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೪

೪. ಕರ್ಕಿ ಡಿ.ಎಸ್.ಕನ್ನಡ ಛಂದೋವಿಕಾಸ, ಪ್ರಿಂಟಿಕ್ ಪ್ರಿಂಟಸ್, ಬೆಂಗಳೂರು,೧೯೭೬.

೫. ಗಿರಿಜಾ, ಸಂಡೂರು ಪರಿಸರದ ಶಾಸನಗಳು ಮತ್ತು ಉಲ್ಲೇಖಿತ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್ ನಿಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೩.

೬. ಚನ್ನಬಸಪ್ಪ ಹಿರೇಮಠ, ಕುರುಗೋಡು ಸಿಂಧರು ಒಂದು ಅಧ್ಯಯನ, ಕೊಪ್ಪಳ ಸಂಗಣ್ಣನವರ ಅಗಡಿ ಸಂಸ್ಕ್ರತ ಪ್ರತಿಷ್ಠನ, ಕೊಪ್ಪಳ, ೧೯೯೫

೭. ಚಿದಾನಂದ ಮೂರ್ತಿ ಎಂ. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ಕನ್ನಡ ಮತ್ತು ಸಂಸ್ಕ್ರತ ನಿರ್ದೇಶನಾಲಯ, ಬೆಂಗಳೂರು. ೧೯೮೪.

೮. ಚಿದಾನಂದ ಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕ್ರತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ಬೆಂಗಳೂರು ೧೯೭೬

೯. ಚೆನ್ನಕ್ಕ ಪಾವಟೆ, ಶಾಸನ ಸಂಜೀವಿನಿ, ಚೆನ್ನಗಂಗಾ ಪ್ರಕಾಶನ ಧಾರವಾಡ, ೨೦೦೩

೧೦. ಜಯಮ್ಮ ಎಚ್. ನೊಳಂಬರ ಶಾಸನಗಳ ಸಾಂಸ್ಕ್ರತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿ ಎಚ್ ಡಿ ಮಹಾಪ್ರಬಂಧ ೨೦೦೨

೧೧. ದುರ್ಗಾದಾಸ್ ಆರ್.ಕೆ. ಬಳ್ಳಾರಿ ಜಿಲ್ಲೆಯ ಬಯಲಾಟಗಳು ಸುಮತಾ ಪ್ರಕಾಶನ, ಬೆಳಗಾವಿ. ೧೯೯೬

೧೨. ಧನವಂತ ಹಾಜವಗೋಳ. ಮುಳಗಂದನಾಡು ಒಂದು ಅಧ್ಯಾಯನ, ಮಹಾದೇವಿ ಪ್ರಕಾಶನ, ಧಾರವಾಡ, ೨೦೦೪.

೧೩. ನರಸಿಂಹ ಮೂರ್ತಿ ಎ.ವಿ, ಕರ್ನಾಟಕ ನಾಣ್ಯ ಪರಂಪರೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

೧೪. ನರಸಿಂಹ ಮೂರ್ತಿ ಎ.ವಿ. ಕರ್ನಾಟಕ ನಾಣ್ಯ ಸಂಪತ್ತು, ಐ ಬಿ ಎಚ್ ಪ್ರಕಾಶನ . ಬೆಂಗಳೂರು ೧೯೮೩.

೧೫. ನರಸಿಂಹ ಮೂರ್ತಿ ಎ.ವಿ, ಕರ್ನಾಟಕದಲ್ಲಿ ಪುರಾತತ್ವ ಶೋಧನೆ, ಕನ್ನಡ ಮತ್ತು ಸಂಸ್ಕ್ರತಿ ನಿರ್ದೇಶನಾಲಯ , ಬೆಂಗಳೂರು ೧೯೮೩.

೧೬. ನರಸಿಂಹಚಾರ್ (ಸಂ). ವಡ್ಡರಾಧನೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೮೬.

೧೭. ನಾಗಯ್ಯ. ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ ೨೦೦೨.

೧೮. ನಾಯಕ ಹಾ. ಮಾ (ಸಂ), ಕನ್ನಡ ವಿಷಯ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೭೯.

೧೯. ಪರಮಶಿವಮೂರ್ತಿ. ಡಿ.ವಿ, ಕನ್ನಡ ಶಾಸನ ಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೨೦. ಭಟ್ಟಸೂರಿ. ಕೆ.ಜಿ. ಗೇರು ಸೊಪ್ಪೆ(ನಗರಬಸ್ತಿ) ಕೇರಿಯ ಜೈನವಾಸ್ತು ಮತ್ತು ಮೂರ್ತಿಶಿಲ್ಪ. ಕರ್ನಾಟಕ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು.

೨೧. ಮಹಾದೇವ ಸಿ, ಮತ್ತು ಇತರರು, ಹೊಸಪೇಟೆ ತಾಲ್ಲೂಕು ದರ್ಶನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ರವಿಂದ್ರನಾಥ. ಕೆ. ಬಳ್ಳಾರಿ ಜಿಲ್ಲೆ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ , ಗುಲಬರ್ಗಾ. ೨೦೦೫.

೨೩. ರಾಮಚಂದ್ರರಾವ್ ಎಸ್.ಕೆ. ಮೂರ್ತಿಶಿಲ್ಪದ ನೆಲೆ ಹಿನ್ನೆಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೫.

೨೪. ರಾಮಚಂದ್ರ ರಾವ್ ಎಸ್.ಕೆ. ದೇವಾಲಯದ ನೆಲೆ ಹಿನ್ನೆಲೆ. ಐ ಬಿ ಹೆಚ್ ಪ್ರಕಾಶನ, ೧೯೭೯.

೨೫. ಲಕ್ಷ್ಮಣ್ ತೆಲಗಾವಿ ಮತ್ತು ಇತರರು ಹುಲ್ಲೂರು ಶ್ರೀನಿವಾಸ್ ಜೋಯಿಸರ ಐತಿಹಾಸಿಕ ಲೇಖನಗಳು, ಹುಲ್ಲೂರು ಶ್ರೀನಿವಾಸ್ ಜೋಯಿಸ ಗ್ರಂಥಪ್ರಕಟಣ ಸಮಿತಿ, ಚಿತ್ರದುರ್ಗ, ೧೯೭೬

೨೬. ವಾಸುದೇವ ಬಡಿಗೇರ, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಕ ಅಧ್ಯಯನ, ೧೯೯೭, ಮಾಯಾ ಪ್ರಕಾಶನ, ಕಮಲಾಪುರ.

೨೭. ವಿರುಪಾಕ್ಷ ಪುಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೨೮. ವೆಂಕಟಸುಬ್ಬಯ್ಯ. ಜಿ. ಕನ್ನಡ ಶಾಸನ ಪರಿಚಯ, ಪ್ರತಿಮಾ ಪ್ರಕಟಣ ಮಂದಿರ, ಬೆಂಗಳೂರು, ೧೯೬೮.

೨೯. ಶಿವರಾಮಕಾರಂತ ಕೆ. ಕರ್ನಾಟಕದಲ್ಲಿ ಶಿಲ್ಪ, ಕನ್ನಡ ಮತ್ತು ಸಂಸ್ಕೃತ ನಿರ್ದೇಶನಾಲಯ, ಬೆಂಗಳೂರು, ೧೯೮೩.

೩೦. ಶಿವರಾಮಕಾರಂತ. ಕೆ. ಭಾರತೀಯ ಶಿಲ್ಪ, ಪ್ರಸಾರಾಂಗ, ಬೆಂಗಳೂರು, ೧೯೭೫

೩೧. ಶೇಷಾದ್ರಿ ಮತ್ತು ಇತರರು(ಸಂ) ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ, ಕನ್ನಡ ವಿಶ್ವಾವಿದ್ಯಾಲಯ, ಹಂಪಿ ೧೯೯೮.

೩೨. ಸುರೇಶ್.ಕೆ.ಎಂ. ಮತ್ತು ಇತರರು, ಕರ್ನಾಟಕ ದೇವಾಲಯಗಳ ಕೋಶ (ಬಳ್ಳಾರಿ ಜಿಲ್ಲೆ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ. ಹಂಪಿ,೧೯೯೯.

೩೩. ಸದಾಶಿವಪ್ಪ ಕುಂ. ಬಾ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ದರ್ಶನ, ಮಹಾಂತೇಶ ಪ್ರಕಾಶನ ಹರಪನಹಳ್ಳಿ, ೧೯೯೦.

೩೪. ಸಿಂದಗಿ ರಾಜಶೇಖರ, ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಶನ್, ಧಾರವಾಢ, ೧೯೮೮.

೩೫. ಡಾ.ಎಂ ಕೊಟ್ರೇಶ್, ಉಚ್ಚಂಗಿದುರ್ಗ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ, ೧೯೯೬

## ಇಂಗ್ಲೀಷ್ ಗ್ರಂಥಗಳು.

1. Abhishankar k. Gazetter of India, Bellary District, Mysore, 1972.
2. Patel c.s. Temples Raichar and Bellary District (1000-1325 AD), Mysore Directotate of Archeology and Museums, Musore.

## ನಿಘಂಟುಗಳು.

೧. ಇಂಗ್ಲಿಷ್ ಕನ್ನಡ ನಿಘಂಟು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೯.

## ಸಂಪುಟಗಳು.

೧. ಜಯದೇವ ಹು.ಕಾ. ಶಾಸನ ಮತ್ತು ಗದ್ಯ ಸಂಪುಟ ೨, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨. ಜ್ಞಾನಾನಂದ ಜಿ. ಶಿಲ್ಪದರ್ಶಿ, ಸಂಪುಟ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೩. ನಾಗರಾಜ ಎಂ.ಜಿ. ಮತ್ತು ಇತರರು (ಸಂ) ಇತಿಹಾಸ ದರ್ಶನ, ಸಂಪುಟ ೧೪, ಕನ್ನಡ ಸಾಹಿತ್ಯ ಅಕಾಡಮಿ, ಬೆಂಗಳೂರು, ೧೯೯೯

೪. ನಾಗರಾಜ ಎಂ. ಜಿ. ಮತ್ತು ಇತರರು (ಸಂ) ಇತಿಹಾಸ ದರ್ಶನ, ಸಂಪುಟ ೧೫, ಕನ್ನಡ ಸಾಹಿತ್ಯ ಅಕಾಡಮಿ, ಬೆಂಗಳೂರು, ೨೦೦೦.

೫. ನಾಗರಾಜ ಎಂ.ಜಿ. ಮತ್ತು ಇತರರು (ಸಂ), ಇತಿಹಾಸ ದರ್ಶನ, ಸಂಪುಟ– ೧೭, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೨.

೬. ದೇವರ ಕೊಂಡಾರೆಡ್ಡಿ ಮತ್ತು ಇತರರು (ಸಂ), ಕನ್ನಡ ವಿಶ್ವವಿದ್ಯಾಲಯದ ಶಾಸನ , ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೭. ಪುಟ್ಟಪ್ಪ .ಕೆ.ವಿ. (ಸಂ), ಕನ್ನಡ ಕೈಪಿಡಿ, ಸಂಪುಟ ೧, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೦.

೮. ಸೂರ್ಯನಾಥ, ಯು. ಕಾಮತ್ ಮತ್ತು ಇತರರು (ಸಂ), ಇತಿಹಾಸ ದರ್ಶನ, ಸಂಪುಟ ೧೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೨.

೯. ಷೇಕ್ ಅಲಿ ಬಿ, ಮತ್ತು ಇತರರು (ಸಂ), ಕರ್ನಾಟಕ ಚರಿತ್ರೆ, ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭.

೧೦. ಬಳ್ಳಾರಿ ಡಿಸ್ಟ್ರಿಕ್ಟ್ ಗ್ಯಾಸಟೆಯರ್, ಕರ್ನಾಟಕ ಸರಕಾರ, ಬೆಂಗಳೂರು ೧೯೭೨.

## ಶಾಸನಗಳು



ಉದ್ದಿ ಬಸವೇಶ್ವರ ದೇವಾಲಯದಲ್ಲಿರುವ ಶಾಸನ, ಮೋರಿಗೆರೆ



ಉದ್ದಿ ಬಸವೇಶ್ವರ ದೇವಾಲಯದ ಮುಖಮಂಟಪದಲ್ಲಿರುವ ಶಾಸನ, ಮೋರಿಗೆರೆ



ಬ್ರಹ್ಮದೇವಾಲಯದಲ್ಲಿರುವ ವೀರಗಲ್ಲು, ಮೋರಿಗೆರಿ.



ಬ್ರಹ್ಮದೇವಾಲಯದಲ್ಲಿರುವ ವೀರಗಲ್ಲು, ಮೋರಿಗೆರಿ.



ಬ್ರಹ್ಮದೇವಾಲಯದ ಹೊರಗಡೆ ಇರುವ
ವೀರಗಲ್ಲು, ಮೋರಿಗೆರಿ.



ಬ್ರಹ್ಮದೇವಾಲಯದ ಪಕ್ಕದಲ್ಲಿ ಇರುವ ವೀರಗಲ್ಲು,
ಮೋರಿಗೆರಿ.



ಬ್ರಹ್ಮದೇವಾಲಯದಲ್ಲಿರುವ ವೀರಗಲ್ಲು,
ಮೋರಿಗೆರಿ.



ಬ್ರಹ್ಮದೇವಾಲಯದಲ್ಲಿರುವ ವೀರಗಲ್ಲು,
ಮೋರಿಗೆರಿ.

# ದೇವಾಲಯಗಳು



ಮರಡಿ ದುರ್ಗಾಂಭಿಕೆ ದೇವಾಲಯ, ಮೋರಿಗೆರೆ.



ಕಲ್ಲೇಶ್ವರ ದೇವಾಲಯ, ಮೋರಿಗರೆ



ಬಸವೇಶ್ವರ ದೇವಾಲಯ, ಮೋರಿಗೆರೆ.



ಉದ್ದಿ ಬಸವೇಶ್ವರ ದೇವಾಲಯ, ಮೋರಿಗೆರೆ.



ಬ್ರಹ್ಮ ದೇವಾಲಯದ ಗೋಪುರ, ಮೋರಿಗೆರೆ.

# ಮೂರ್ತಿ ಶಿಲ್ಪಗಳು



ಬಸವೇಶ್ವರ ದೇವಾಲಯದ
ಸಭಾಮಂಟಪದಲ್ಲಿರುವ ನಂದಿ ಶಿಲ್ಪ, ಮೋರಿಗೆರೆ.



ಗರ್ಭ ಗುಡಿಯಲ್ಲಿರುವ ಮರಡಿ ದುರ್ಗಾಂಭಿಕೆ,
ಮೋರಿಗೆರೆ.



ಕಲ್ಲೇಶ್ವರ ದೇವಾಲಯದ ಸಭ ಮಂಟಪದಲ್ಲಿರುವ
ನಂದಿ ಶಿಲ್ಪ, ಮೋರಿಗೆರೆ.



ಗರ್ಭ ಗುಡಿಯಲ್ಲಿರುವ ರಾಮಲಿಂಗೇಶ್ವರ, ಮೋರಿಗೆರೆ.



ಗರ್ಭ ಗುಡಿಯಲ್ಲಿರುವ ಬ್ರಹ್ಮದೇವರು, ಮೋರಿಗೆರೆ.



ಗರ್ಭ ಗುಡಿಯಲ್ಲಿರುವ ಆಂಜನೇಯ, ಮೋರಿಗೆರೆ.



ಉದ್ದಿ ಬಸವೇಶ್ವರ ದೇವಾಲಯದ ಗರ್ಭ
ಗುಡಿಯಲ್ಲಿರುವ ಈಶ್ವರ ಲಿಂಗ, ಮೋರಿಗೆರೆ.



ಉದ್ದಿ ಬಸವೇಶ್ವರ ದೇವಾಲಯದ
ಸಭಮಂಟಪದಲ್ಲಿರುವ ನಂದಿ ಶಿಲ್ಪ, ಮೋರಿಗೆರೆ.



ಉದ್ದಿ ಬಸವೇಶ್ವರ ದೇವಾಲಯದ
ಮುಖಮಂಟಪದಲ್ಲಿರುವ ಗಜಲಕ್ಷ್ಮಿ, ಮೋರಿಗೆರೆ.



ಉದ್ದಿ ಬಸವೇಶ್ವರ ಗರ್ಭ ಗುಡಿಯಲ್ಲಿರುವ ಈಶ್ವರ
ಹಾಗೂ ಮುಖ ಮಂಟಪದಲ್ಲಿರುವ ನಂದಿ ಶಿಲ್ಪ,
ಮೋರಿಗೆರೆ.

## ಶಾಸನ ಪಾಠಗಳು

### ಮೊರಿಗೇರಿ

### ಉದ್ದಿ ಬಸವಣ್ಣನ ಗುಡಿಯಲ್ಲಿ ಇರಿಸಿರುವ ಶಾಸನ

**[A.R.No.443 OF 1914; SII IX pt I.No.101]**

ಶಕವರ್ಷ ೯೬೭ ನೆಯ ಪಾರ್ಥಿವ, ಕಾರ್ತಿಕ ಪುಣ್ಣಮೆ, ಬೃಹಸ್ಪತಿವಾರ ಸೋಮಗ್ರಹಣ, ಸಂಕ್ರಾಂತಿ, ವ್ಯತೀಪಾತಕ್ಕೆ ಸರಿಯಾದ ಕ್ರಿ.ಶ.೨೮-೧೦-೧೦೪೫ರ ಸೋಮವಾರ (ಬೃಹಸ್ಪತಿವಾರವಲ್ಲ), ಚಂದ್ರಗ್ರಹಣದಂದು ಚಾಳುಕ್ಯ ತ್ರೈಳೋಕ್ಯಮಲ್ಲ ಆಹವಮಲ್ಲದೇವನು ರಾಜ್ಯಭಾರ ಮಾಡುತ್ತಿದ್ದಾಗ, ಇವನ ಸಾಮಂತ ನೊಳಂಬ ಘಟೆಯಂಕಕಾರನ ಮಗ ಉದಯಾದಿತ್ಯ, ಇವನ ಮಗ ಜಗದೇಕಮಲ್ಲ ಇರ್ಮಡಿನೊಳಂಬ, ಇವನ ತಮ್ಮ ತ್ರೈಳೋಕ್ಯಮಲ್ಲ ನನ್ನಿನೊಳಂಬಪಲ್ಲವಪೆರ್ಮಾನಡಿಯು ಬಲ್ಲಕುಂದೆ-೩೦೦, ಕದಂಬಳಿಗೆ-೧೦೦೦, ಕುದಿಯಹರವಿ-೬೦ ಮತ್ತು ನೊಳಂಬವಾಡಿ-೩೨೦೦೦ವನ್ನು ಆಳುತ್ತಿರಲು, ದಂಡನಾಯಕ ತಿಕಣ್ಣ ಪ್ರಮುಖವಾಗಿ ಲೆಂಕಸಾಸಿರ್ವರು ಅಮ್ಮಳೆ, ನೆಲ್ಲಿಕುದಿರು, ಸೊನ್ನ, ಪೊರಲ್ಗುಂದೆ, ಸೂಗೂರು, ಮೋರಂಗೆರೆ ಮೊದಲಾದ ಆರು ಗ್ರಾಮಗಳನ್ನು ಆಳುತ್ತಿರಲು ಉದಯಾದಿತ್ಯನಿಗೆ ಪರೋಕ್ಷ ಚಿನಯವಾಗಿ ೨೪ ಜನರಿಗೆ ಛತ್ರವನ್ನೂ ನೊಳಂಬೇಶ್ವರ ಮತ್ತು ಲೆಂಕೇಶ್ವರವನ್ನು ಮಾಡಿಸಿ ಅವುಗಳ ಪೂಜೆಗೆ ಪೂವಿನಪಡಂಗಿಲೆಯ ನೆಲೆವೀಡಿನಲ್ಲಿದ್ದಾಗ ಘಟ್ಟಿಯರಸರು ಕೋಗಳಿಯ ಮಠದ ಮಳೆಂಂಾಳಪಂಡಿತನ ಶಿಷ್ಯನಾದ ಜ್ಞಾನೇಶ್ವರಪಂಡಿತ ಅವನ ಶಿಷ್ಯನಾದ ಸೋಮೇಶ್ವರಪಂಡಿತನ ಕಾಲನ್ನು ತೊಳೆದು ದಾನ ನೀಡುತ್ತಾನೆ. ಚಟ್ಟರಸ, ಘಟ್ಟಿಯರಸ, ಸೇನಬೋವ ಗೋವಿಂದಯ್ಯನು ವಿದ್ಯಾದಾನಕ್ಕೆ, ಸೂಳವಾಳಂಗೆ, ಕೊಳಲು ನುಡಿಸುವವನಿಗೆ, ಪರೆಕಾರನಿಗೆ, ಸೂಳೆಯರಿಗೆ, ಕಲ್ಕುಟಿಗ ಮುಚ್ಚೂಜ ಮುಂತಾದವರಿಗೆ ಭೂದಾನ ನೀಡುತ್ತಾರೆ. ಶಾಸನಾಂತ್ಯದಲ್ಲಿ ನೈಷ್ಠಿಕರಲ್ಲದ ತಪೋಧನರನ್ನು ಮಠದಿಂದ ನಾಡರಸರು, ಮೋರಿಂಗೆರೆಯ ೧೨ ಮಹಾಜನರು ಸೇರಿ ಓಡಿಸಬೇಕೆಂದಿದೆ. ಈ ಶಾಸನವನ್ನು ಬರೆದವನು ನಾಗಮಯ್ಯ. ಕಂಡರಿಸಿದವನು ಅಗ್ಗಲೋಜನ ಮಗ ಮುಚ್ಚೋಜ.

೧. ಸ್ವಸ್ತಿ [॥ *] ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾ

೨. ರಕ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಜಯಸಿಂಹವಲ್ಲಭಾಗ್ರಜಂ ಚಲದಂಕರಾಮಂ

೩. ತ್ರೈಲೋಕ್ಯಮಲ್ಲಂ
ಶ್ರೀಮದಾಹವಮಲ್ಲದೇವವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚನ್ದ್ರಾ

೪. ರ್ಕ್ಕತಾರಂ ಸಲುತ್ತಿರೆ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಪಲ್ಲವಾನ್ವಯ ಶ್ರೀಪೃಥ್ವೀವಲ್ಲಭಂ ಪಲ್ಲವ ಕುಳತಿ

೫. ಳಕನೇಕವಾಕ್ಯಂ ಕಾಂಚೀಪುರವರೇಶ್ವರಂ ರಾಜವಿದ್ಯಾಧರಂ ಕನ್ದುಕಾಚಾರ್ಯ್ಯನಿರೆವಬೆಡಂಗ ನೊಳಂಬ

೬. ಘಟೆಯಂಕಕಾರದೇವಂ ತಸ್ಯಾಗ್ರಸುತಂ ಘಟೆಯೊಡೆಗಣ್ಡ ರಣರಂಗಭೀಮಂ ಜಗದೇಕಮಲ್ಲ ನೊಳಂಬನುದ

೭. ಯಾದಿತ್ಯದೇವಂ ತಸ್ಯಾಗ್ರತನೆಯಂ ರಾಜಗಜಸಿಂಹನೇಕಾಂಗವೀರಂ ಜಗದೇಕಮಲ್ಲನೊಳಂಬ ನಿರ್ಮ್ಮಡಿನೊಳಂಬ ತಸ್ಯಾ

೮. ನುಜಂ ಸ್ವಸ್ತಿ ಸಮಧಿಗತಪಂಚಮಹಾಶಬ್ದ ಪಲ್ಲವಾನ್ವಯ ಶ್ರೀಪೃಥ್ವೀವಲ್ಲಭಂ ಪಲ್ಲವಕುಳತಿಳಕನಮೋಘವಾಕ್ಯಂ

೯. ಕಾಂಚೀಪುರವರೇಶ್ವರಂ ವೈರಿನಾರಾಯಣಂ ದ್ರೋಹಕಾಳಾನಳಂ ಮಣ್ಡಳಿಕತ್ರಿಣೇತ್ರಂ ರಾಜ ಮನೋಜಂ ಹಯವತ್ಸ

೧೦. ರಾಜಂ ಚಿತ್ರವೆಡಂಗಂ ತ್ಯಾಗಚಿನ್ತಾಮಣಿ ರಾಜಗಜಸರ್ವ್ವಜ್ಞಂ ಶ್ರೀಮತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆ

೧೧. ರ್ಮ್ಮಾನಡಿಗಳ್ ಬಲ್ಲಕುಂದೆ ಮೂನೂರುವಂ ಕೋಗಳಿಯಯ್ನೂರುವಂ ಕದಂಬಳಿಗೆ ಸಾಯಿರಮುಮಂ ಕುದಿಯಹ

೧೨. ರವಿಯೆರ್ಪತ್ತುಮಂ ಕರಿವಿಡಿ ಮೂವತ್ತುಮಂ ಪಂಚಗ್ರಾಮಂಗಳುಮಂ ನೊಳಂಬವಾಡಿ ಮೂವತ್ತಿಚ್ಛಾಸಿರಮುಮನ

೧೩. ಚಳಪ್ರವೃತ್ತಿಯಿಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನದಿನಾಳುತ್ತಿರೆ ತತ್ಪಾದಪದ್ಮೋಪಜೀವಿಗಳ್ ॥ ವೃತ್ತಂ ॥

೧೪. ನುಡಿವುದು ನನ್ನಿ ಮಾಡುವುದು ಕೀರ್ತ್ತನಮೀವುದೆ ಸದ್ವಿನೋದಮೋಯ್ಕನೆ ಮರೆವೊಕ್ಕರನ್ನೆರೆಯೆ ಕಾವ ಗುಣಂ ಬಸ

೧೫. ನಂ ಮಹಾಜಿಂಯೊಳ್ಸದೆಂಬುದುದುಗ್ಗಿಂಯೆಂದು ನುಡಿವೀನುಡಿ ಲೆಂಕರೊಳಾವಕಾಲಂಮುಂನಡೆವುದು ಪಣ್ಡಿತರ್ಪ್ಪೊಗಳೆ

೧೬. ಭೇರಿಯ ಗೋಸನೆ ಭೂತಳಾಗ್ರದೊಳ್ ॥ ಸಮಧಿಗತ ಪಂಚಮಹಾಶಬ್ದ ಮಹಾಮಣ್ಡಳೇಶ್ವರ ಶ್ರೀನೊಳಂಬಾಧಿರಾಜಶ್ರೀಪಾ

೧೭. ದಪದ್ಮಾಮೋದಾಸಕ್ತಮಧುಕರರ್ । ವೈರಿಬಳಭೀಕರರ್ಪ್ಪಲ್ಲವಾನ್ವಯ ಮಹಾರಾಜರಾಜ್ಯಮೂಳ ಸ್ತಂಭಾತ್ಮ ಕರ್ಚ್ಚಮ

೧೮. ರೀಧ್ವಜವಿರಾಜಿತರಾನೆವರೆಘೋಷಣರ್ಸ್ಸತ್ಯಮಣಿಭೂಷಣರ್ಧರ್ಮ್ಮಾನುಕೂಳರ್

ಜಯವಧೂ ಲೋಲರ್

೧೯. ಕಣ್ಣಳೀ ಮೂಳಭದ್ರೋದ್ಭವ

ವೀರಾವರಾರರೇಕಯ್ಯವೀರರ್ದ್ದೀನಾನಾಥಚಿನ್ತಾಮಣಿಗಳಾಶ್ರಿತಜನ ಕಳ್ಪವೃಕ್ಷರ್ಸ್ಸರ

೨೦. ಣಾಗತವಜ್ರಪಂಜರ ನಾಮಾದಿಸಮಸ್ತಪ್ರಸಸ್ತಿಸಹಿತಂ ಶ್ರೀಮದ್ದಣ್ಣನಾಯಕ ತಿಕಣ್ಣಪ್ರಮುಖ

೨೧. ಲೆಂಕಸಾಸಿರ್ವ್ವರು ಅರ್ಮ್ಮಳೆ । ನೆಲ್ಲಿಕುದಿರು । ಸೊನ್ನ । ಪೊಳಲ್ಗುಂದೆ । ಸೂಗೂರು। ಮೋರಿಂಗೆರೆ ಮೊದಲಾಗಾಳುಂ ಬಾಡಮು

೨೨. ಮನಣುಗಜೀವಿತವಾಗಿ ತ್ರಿಭೋಬ್ಯಂತರಸಿದ್ಧಿಯಿನಾಳುತ್ತಂ॥ ಕಂದ॥ ವಾರಿಧಿಪರಿವೃತ ಧಾತ್ರೀ ನಾರಿಯ ವದನ

೨೩. ದವೊಲೆಸೆವ ಕೋಗಳಿನಾಡೊಳ್ಮೋರಿಂಗೆರೆ ತಿಳಕಾಳಂಕಾರಮನನುಕರಿಪುದೆನೆ ಜನಂ ಬಣ್ಣಿಸದೇ॥ ಅಂತೆನಿಸಿದ

೨೪.ಗ್ರಹಾರಂ ಮೋರಿಂಗೆರೆಂಯೊಳ್ ಶ್ರೀಮದುದುಂರಾದಿತ್ಯದೇವಂಗೆ ಪರೋಕ್ಷವಿನಯರ್ಪ್ಪತ್ತನಾಲ್ವರ್ಗ್ಗೆ ಸತ್ರ

೨೫. ವುಮಂ ನೊಳಂಬೇಶ್ವರಮುಮಂ ಮಾಡಿಸಿ ತಮ್ಮ ಪೆಸರ ಲೆಂಕೇಶ್ವರಮಂ ಮಾಡಿಸಿ ದೇವರಂಗ ಭೋಗಕ್ಕೆ ಪಾದಮೂ

೨೬. ಲಪರಿವಾರಕ್ಕ ಮಠದ ವಿದ್ಯಾದಾನಕ್ಕವೆಂದರಸರ್ಗ್ಗೆ ಬಿನ್ನಪಂಗೆಯ್ದು ಸವಂಟಿಯಪಾಳಂಪಡೆದದರ್ಕ್ಕೆ ಶಿವಮು

೨೭. ರಮೆಂದು ಪೆಸರನಿಟ್ಟು ಸಕವರ್ಷ ೯೬೭ ನೆಯ ಪಾರ್ತ್ಥಿವಸಂವತ್ಸರದ ಕಾರ್ತ್ತಿಕದ ಪುಣ್ಣಮೆ ಬೃಹ

೨೮. ಸ್ಪತಿವಾರ । ಸೋಮಗ್ರಹಣ । ಸಂಕ್ರಾತ್ತಿ ವ್ಯತೀಪಾತನತ್ತೀ ತಿಥಿಗಳ್ ಕೂಡಿದ ಪುಣ್ಯದಿದೋಳ್।

೨೯. ಅರಸರ್ದ್ದಾಳಿಕ್ರಮಗೊಳ್ ಶಿವಾಪಂನ ಪಿಡಿದು ಮುಗುಳೆ ಬಂದು ಪೂವಿನಪಡಂಗಿಲಿಯಪ್ಪಯಣ ವೀಡಿನೊಳ್

೩೦. ಸ್ವಸ್ತಿ ಸಂಸಾರಪಾರಾವಾರಮದಜಳ ಮಹಾಪ್ರಯಾಸೋತ್ತುಂಗತರಂಗಭಂಗಭಗ್ನಮಗ್ನಾನೇಕಪ್ರಾಣಿಜಾತಿ

೩೧. ಕರಿಮಕರ ತಿಮಿತಿಮಿಂಗಿಳ ಪ್ರಭೃತಿಪ್ರಕ್ಷುಭಿತಾವರ್ತಗರ್ತಾಂತಃಪತಿತಶಿವಾನುಗೃಹೀತ ಶಿಷ್ಪಜನೋತ್ರ

೩೨. ಶ್ರೀಮಲ್ಲಕುಳೀಶಮುಖಕಮಳವಿನಿರ್ಗ್ಗತಶಕಳಶಾಸ್ತ್ರಾರ್ತ್ಥ ಸದ್ಭಾವಾಭಿಜ್ಞರ್ । ಯಮನಿಯಮಾಸನಪ್ರಾಣಾಯಾಮ

೩೪. ಪ್ರತ್ಯಾಹಾರಧ್ಯಾನಧಾರಣಜಪಸಮಾಧಿಸಂಪನ್ನರಪ್ಪ ಕೋಗಳಿಯಯ್ನೂರರ ಮಠಾಧಿಪತಿಗಳ

೩೫. ಪ್ಪ ಸಿಂಹಪರ್ಷೆಯ ಶ್ರೀಮನ್ಮಲೆಯಾಳಪಣ್ಡಿತದೇವರಶಿಷ್ಯರ್ಸ್ಸಮಸ್ತಶಾಸ್ತ್ರವಾದಪಾರಗರಪ್ಪ ಶ್ರೀ

೩೬. ಮಜ್ಞಾನೇಶ್ವರಪಣ್ಡಿತರವರಶಿಷ್ಯರ್ಯ್ಯಮನಿಯಮಾಸನಪ್ರಾಣಾಯಾಮ ಪ್ರತ್ಯಹಾರ ಧ್ಯಾನಧಾರಣಜ

೩೭. ಪಸಮಾಧಿಸಂಪನ್ನರಪ್ಪ ಶ್ರೀಮತ್ಸೋಮೇಶ್ವರಪಣ್ಡಿತರ್ಗ್ಗಣ್ಣಿಗೆಟಿಯ ನಗರೇಶ್ವರದೊಳಿರ್ದ್ದೇವರ್ಗ್ಗಂಬಳಿಯ

೩೮. ನ(ಘ)ಟ್ಟಿಯರಸರಿಂ ಕಾಲಂ ಕಚ್ಚಿಸಿ ಸರ್ವನಮಸ್ಯಂ ಸರ್ವ್ವಾಭ್ಯಂತರಸಿದ್ಧಿ ಸರ್ವಬಾಧಾಪರಿಹಾರಂದೇವಭೋಗವಾಗೆ ಬಿ

೩೯. ಟ್ಟರ್ [॥ *] ಸ್ವಸ್ತ ಸಮಸ್ತದುಷ್ಟಾರಾತಿಮನ್ನೆಯಮದಾನ್ಧಗನ್ಧಗಜಸಿಂಹ ಸಾಹಸೋತ್ತುಂಗನುಜ್ಜೆ[ನಿ]ಪುರವರೇಶ್ವರಗುತ್ತರ

೪೦. ಭೀಮ ಚಲದಂಕರಾಮ ನಾಮಾದಿ ಸಮಸ್ತಪ್ರಸ್ತಿಸಹಿತಂ ಶ್ರೀಮತ್ ಬಲ್ಲವಾಡಿಯೆಲ್ಬತ್ತರ ಮನ್ನೆಯ

೪೧. ಚಟ್ಟರಸ ಪಾದಪೂಜೆಯಂ ಕೊಂಡಲ್ಲಿಯ ಮನ್ನೆಯ ಸಾಮ್ಯಮನಭ್ಯಂತರಸಿದ್ಧಿ ಬಿಟ್ಟ ॥ ಸ್ವಸ್ತಿ ಸಮಧಿಗತಪಂ

೪೨. ಚಮಹಾಶಬ್ದ ಮಹಾಸಾಮಂತಂ ಬನವಾಸಿಪುರವರೇಶ್ವರಂ ಕದಂಬರಾಭರಣಂ ಪರಾಂಗನಾಪುತ್ರಂ ಸತ್ಯಕಾನೀನ ಶಾಚಾಂಜ

೪೩. ನೇಯ ಸಂಗ್ರಾಮಜತ್ತಲಟ್ಟ ಮನ್ನೆಯವಲ್ಲಹ ಶ್ರೀಸಾಮನ್ತಗರುಡಪಾದಪಂಕಜಭ್ರಮರ ನಾಮಾದಿಸಮ

೪೪. ಸ್ತಪ್ರಸಸ್ತಿಸಹಿತ ಕೋಗಳಿಯಯ್ನೂರರ ಮನ್ನೆಯಂ ಶ್ರೀಮತ್ ಘಟ್ಟಿಯರಸ ಮೋರಿಂಗೆರೆಯನೊಳ...

೪೫. ಶ್ವರಪುರದ ಮನ್ನೆಯಸಾಮ್ಯವನಭ್ಯಂತರಸಿದ್ಧಿ ಧಾರಾಪೂರ್ವಕಂ ಬಿಟ್ಟ । ನೆಲ್ಲಿಕುದಿರೂರೊಡೆಯದಾಸಿಮ.....

೪೬. ನೊಳಗಾಗಿ ನೆಲ್ಲಿಕುದಿರಲ್ದೇವರ್ಗೆ ಪೂವಿನತೋಣ್ಟವುವಂ ಬಿಟ್ಟರ್ । ಅಂತಾಯೂರಾಯಸ್ಥಾನಮಂಮೂರು ಭಾ......

೪೭. ಮಾಡಿದಲ್ಲಿ ದೇವರಭಾಗದೊಳಗೆ ಲೇಂಕರ ಸೇನಬೋವಂ ಗೋವಿಂದಯ್ಯಂ ಕೊಣ್ಡಂಗೆರೆಯೇರಿಯಮೇಲೆ......

೪೮. ಬೇಶ್ವರದ ಪ್ರತಿಬದ್ಧಮಾಗೆ ಮಾಡಿಸಿದ ಗೋವಿದೇಶ್ವರದೇವರ್ಗ್ಗೆ ಬಿಟ್ಟ ಕರಿಯ

ಮತ್ತರೆಂಟು ಕಿಸುಮತ್ತರ್ ನಾಲ್ಕು

೪೯. ಅಂತು ಬಿಟ್ಟ ಪನ್ನೆಎಡು ಮತ್ತರು ಪತ್ತು ಕೊಳಗ ವೆದೆಯ ಗರ್ದೆಯುಂ ನಡೆವುದು । ಮಠದ ವಿದ್ಯಾದಾನಕ್ಕೊನ್ದು ಭಾಗ

೫೦. ಪರಿಗ್ರಹದೊಂದು ಭಾಗದೊಳಗೆ ಪೆರ್ಗ್ಗಡೆ ಚಾವುಣ್ಡಮಯ್ಯಂಗೆ ಧಾರಾಪೂರ್ವ್ವಕಂ ಕರಿಯ ಮತ್ತರೆಂಟು ಕಿಸುಮತ್ತರ್ನ್ನಾ

೫೧.ಲ್ಕು ಪಿರಿಯರಂ[ಮಾದ *].......... ಯ್ಯಂಗೆ ಮತ್ತರ್ಪ್ಪನ್ನೆರೆಡು । ಸೂಳವಾಳಂಗೆ ಮತ್ತರ್ಪ್ಪನ್ನೆರೆಡು। ವಂಸಿಗರಿವ್ವರ್ಗ್ಗೆಮಾಗಿ

೫೨. ಮತ್ತರಿರ್ಪ್ಪದಿಂಬರ್ಗ್ಗೆ ಪತ್ತು ಮತ್ತರ್ಪ್ಪತ್ತನಾಲ್ಕು । ಸೂಳೆಯರ್ಪ್ಪನ್ನಿವ್ವರೊಳಗೆ ಪಿರಿಯರನುವಲ್ಲದ

೫೩. ಸೋಳೆಯರ್ಪ್ಪದಿಂಬರ್ಗ್ಗೆ ಪತ್ತು ಮತ್ತರ ಸವಕಟ್ಟಿನೊಳ್ಮತ್ತನ್ನೂರು ಘಳಿಗೆಯ ಮಾಣಿಗಳ್ನಾಲ್ವರ್ಗ್ಗವೆಂಟು ಮ

೫೪. ತ್ತರ ಸವಕಟ್ಟಿನೊಳ್ಮತ್ತಮ್ಮೂವತ್ತೆರೆಡು । ಕಲಿಸಿಂದನೊಳಗಾಗಿ ಕಾಹಿನಾಡಯ್ವರ್ಗ್ಗೆ ಮತ್ತರ್ನ್ನಾಲ್ವತ್ತು ಖಣ್ಡಸ್ಫುಟಿತಂ ಮೊ

೫೫. ದಲಾಗೆಲ್ಲಾ ಬೆಸನುಮಂ ನಡೆಯಿಸುವ ರೂವಾರಿ ಮುಚ್ಚೋಜಂಗೆ ಮತ್ತರ್ಪನ್ನೆರಡು। ನಟ್ಟವಂಗೆಮತ್ತರ್ಪ್ಪನ್ನೆರಡು

೫೬. ಇನ್ತಿ ಪರಿಗ್ರಹವೆಲ್ಲಂ ದೇವರ್ಗ್ಗಂ ತಪೋಧನರ್ಗ್ಗಂ ಬೆಸಕೆಯ್ದಣ್ಬರಲ್ಲಿ ದುಷ್ಟರಂ ತಪೋಧನರ್ದ್ದಣ್ಡಿಸಿನಡೆಯಿಸುವರ್

೫೭. ಇದು ನೈಷ್ಠಿಕಸ್ಥಾನಮಿಲ್ಲಿ ನೈಷ್ಠಿಕರಲ್ಲದ ತಪೋಧನಮಿರಲಾಗದು ಬ್ರಹ್ಮಚರ್ಯ್ಯದಿಂ ಕೆಟ್ಟು ನಡೆವ ತಪೋಧನ

೫೮. ರಂ ನಾಡನಾಳ್ವರಸುಂ ಮಂನೆಯನು ಮೋರಿಂಗೆರೆಯ ಪನ್ನಿರ್ವರೂರೊಡೆಯರುವಿರ್ದು ಪೊರಮಡಿಸಿಯವರ

೫೯. ಸಂತತಿಯ ನೈಷ್ಠಿಕರನಿರಿಸುವರಿದನುಪೇಕ್ಷೆಗೆಯ್ದವರ್ಗ್ಗೀ ಧರ್ಮ್ಮಮನಳಿದ ದೊಷಮಕ್ಕು । ಆಚಾರಗೆಟ್ಟು ಪೋಗ

೬೦. ದೆ ಮೊಣ್ಡಿಯತನಂ ಗೆಯ್ದು ನಡೆವಂ ಶಾವನಗಾರ್ದಭ ಚಣ್ಡಾಳನಾತಂ ಸತ್ತದೆ ಪನ್ದಿ ಸತ್ತದು ನಾಯ್ಸತ್ತುದು ಇನ್ತೀ ಧರ್ಮ್ಮ

೬೧. ಮಂ ರಕ್ಷಿಸಿದಾತಂಗೆ ವಾರಣಾಸಿಯೊಳ್ಸೂರ್ಯ್ಯಗ್ರಹಣದನ್ದು ಸಾಸಿರಕವಿಲೆಯ ದೇವರ್ಗ್ಗಂ ಬ್ರಾಹ್ಮಣರ್ಗ್ಗಂ

೬೨. ಕೊಟ್ಟ ಪುಣ್ಯಮಕ್ಕು । ಈ ಧರ್ಮ್ಮಮನಳಿವಾತಂಗಮಳಿಯಲೊಡಂಬಟ್ಟಂಗ ವಾರಣಾಸಿಯೊಳಂ ಕುರುಕ್ಷೇತ್ರ [ದೊ]

೬೩. ೪೦ ಸಾಸಿರ ಕವಿಲೆಯುಮಂ ತಪೋಧನರುಮಂ ಬ್ರಾಹ್ಮಣರುಮ(ಂ)ನಳಿದ ದೋಷಮಕ್ಕು । ಬಹುಭಿರ್ವಸುಧಾ ದತ್ತಾ ರಾ[ಜ]

೬೪.ಸ್ಸಗರಾದಿಭಿಃ ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತದಾ ಫಲಂ । ಸ್ವದತ್ತಾಂ ಪರದತ್ತಾಂವಾ ಯೋ ಹರೇತ ವಸುಂಧರಾಂ । ಷಷ್ಟಿರ್ವ

೬೫. ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಮಿಃ ॥ ಯತ್ತ್ರದಾನಾದ್ವಸೇತ್ಸರ್ಗ್ಗೇ ಯಾವತ್ಕಾಳಸ್ಯ ಸಖ್ಯಯಾ । ತಸ್ಮಾಚ್ಚತಗುಣಂ ಕಾಲಂ ತದ್ವ

೬೬. .. ಕೇ ವಸೇತ್ ॥ ಸಾಮಾನ್ಯೋಯಂ ಧರ್ಮ್ಮಸೇತುನ್ನ [ೃ*]ಪಾಣಂ ಕಾಲೇ ಕಾಳೇ ಪಾಳನೀಯೋ ಭವದ್ಭಿಃ । ಸರ್ವ್ವಾನೇತಾನ್ಭಾಗಿನಃ ಪಾರ್ತ್ಥಿವೇಂ

೬೭. .... ಯೋ ಭೂಯೋ ಯಾಚತೇ ರಾಮ .. । ಶ್ರೀಮದಣ್ಣಿಗೆರೆಯ ನಗರೇಶ್ವರ ವಿದ್ಯಾಭರಣಜೀಯ.

೬೮. ... ಗಂ ನಾಗಮಯ್ಯಂ ಬರೆದಂ ಮೋ... ಅಗ್ಗಳೋಜನ ಮಗಂ ರೂವಾರಿ ಮುಚ್ಚೋಜಂ ಬೆಸಗೆಯ್ದ॥ ಮಂಗಳಂ@

೨೫

## ಅದೇ ದೇವಾಲಯದಲ್ಲಿರುವ ಇನ್ನೊಂದು ಶಾಸನ

**[A.R.NO.443-A of 1914;SII IX pt I.No.151]**

ದುಂದುಭಿಸಂವತ್ಸರದ ಮಾರ್ಗಶಿರ, ಶುದ್ಧ ಪೌರ್ಣಮಿ, ಸೋಮವಾರ ಅಂದರೆ ಕ್ರಿ.ಶ. ೭-೧೧-೧೦೮೨ರ ಸೋಮವಾರದಂದು ರಾಜಗುರು ವಾಮರಾಸಿದೇವನು ಬೋವರ್ಸನ ಬಾವಿಗೆ ೧೨ ಮತ್ತರು ಭೂಮಿ ನೀಡಿದ.

೧. ಸ್ವಸ್ತಿ [॥ *] ಶ್ರೀಮತ್ ದುಂದುಭಿಸಂವತ್ಸರದ

೨. ಮಾರ್ಗ್ಗಸಿರ ಸುದ್ಧ ಪೌರ್ನ್ನಮಿ ಸೋಮವಾ

೩. ರದಲಿ ನೊಣಂಬೇಶ್ವರದೇವರಹಳ್ಳಿ ಸವಡಿಯಲ್ಲಿ ಶ್ರೀಮತು ರಾಜಗುರು ವಾಮರಾಸಿದೇವರು

೪. ಮೋರಿಂಗೆರೆಯ ಬೋವರ್ಸನ ಬಾವಿಗೆ ಯರೆಯ ಮತ್ತರು ೪ ಹೊಂಗೆ ೪ ಕೆಂಗಾಡು ೪ ಅನ್ತು ಮತ್ತರು ೧೨ ಸ[ಮ]ನಿವೆಲ್ಲಮ [॥*]

೨೬

## ಅದೇ ದೇವಾಲಯದ ಮುಖಮಂಟಪದಲ್ಲಿನ ಶಾಸನ

**[A.R.NO.442-A of 1914;SII IX pt I.No.127]**

ಶಕ ೯೮೬ನೆಯ ಕ್ರೋಧಿಸಂತ್ಸರದ ಪುಷ್ಯ, ಪುಣ್ಣಮಿ, ಆದಿತ್ಯವಾರ, ಉತ್ತರಾಯಣ ಸಂಕ್ರಾಂತಿಗೆ ಸರಿಯಾದ ಕ್ರಿ.ಶ.೨೬-೧೨-೧೦೬೪ ಭಾನುವಾರವಾಗಿದ್ದು, ಆ ದಿನ ಸಂಕ್ರಮಣದ ದಿನವಲ್ಲ. ಸಂಕ್ರಮಣವು ಇದೇ ತಿಂಗಳ ೨೪ ರಂದು ಆಗಿರುತ್ತದೆ. ವೆಂಗಿಮಣ್ಡಳೇಶ್ವರ ಶ್ರೀವಿಷ್ಣುವರ್ಧನಮಹಾರಾಜ ವಿಜಯಾದಿತ್ಯನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ದಕ್ಷಿಣ ದಿಕ್ಕಿನ ದಿಗ್ವಿಜಯಾರ್ಥವಾಗಿ ಬಂದಾಗ ಮೊರಿಂಗೆರೆಯ ನೊಳಂಬೇಶ್ವರ ದೇವರ . . . ಪಂಡಿತರ ಕಾಲನ್ನು ತೊಳೆದು ಪಾರಮೇಶ್ವರದತ್ತಿಯಾಗಿ ಭೂದಾನ ನೀಡಿದ. ತಂತ್ರಾಪಾಳ ಮೈಲಯ್ಯನು ರಾಜನ ಆಣತಿಯಂತೆ ದಾನ ನೀಡುತ್ತಾನೆ.

೧. ಸ್ವಸ್ತಿ [॥ *] ಸಮಸ್ತಭುವನಾಶ್ರಯಂ ಸಮಸ್ತಬುಧಜನಾಶ್ರಯನಾಹವಮಲ್ಲನಂಕಕಾರಂ ಪರಮಣ್ಡಳಸೂ

೨. ರೆಕಾರಂ. . . . . ಜನಾಧಾರ ವೈರಿಮದಮರ್ದ್ದನ ಪ್ರತಾಪಜನಾರ್ದ್ದನನಚಳಿತವಾಕ್ಯಂ ಚಾಳು

೩. ಕ್ಯ . . . . ಮದನ ವಿಪಕ್ಷಕುಳಕಾಳದಣ್ಡಂ ವೀರಮಾರ್ತಣ್ಡಂ ರಿಪು. ....... ಹೃದ

೪. ಯಸೆಲ್ಗಂ ಸಾಹಸಮಲ್ಲಂ ದೀನಾನಾಥಚಿಂತಾಮಣಿ ಮಣ್ಡಳಿಕಮಕುಟಚೂಡಾಮಣಿ ವೆಂಗಿ ಮಣ್ಡಳೇಶ್ವರನಯ್ಯ

೫. . . . . ನಚಳಪ್ರವೃತ್ತಿಯಿಂ ದುಷ್ಟನಿಗ್ರಹ ವಿಸಿಷ್ಟಪ್ರತಿಪಾಳನದಿನಾಳುತ್ತಮಿರೆ ಸಕವರ್ಷ ೯೮[೬ನೆ]

೬.ಯ ಕ್ರೋಧಿಸಂತ್ಸರದ ಪೌಷ್ಯದ ಪುಣ್ಣಮೆ ಯಾದಿತ್ಯವಾರಮುತ್ತರಾಯಣಸಂಕ್ರಾಂತಿಯಂದು

೮. ದಕ್ಷಿಣದಿಶಾವರಕ್ಕೆ ಬಿಜಯಂಗೆಯ್ಯುತ್ತ ಮುರಜೆಯ. . . . ನೋಳ್ಸಮಸ್ತಶಾಸ್ತ್ರಪಾರಾವಾ

೯. ರಗರಪ್ಪ ಶ್ರುಮನ್ಮೋರಿಗೆರೆಯ ನೊಳಂಬೇಶ್ವರ . . . . . ಶ್ವರಪಣ್ಡಿತದೇವರ ಕಾಲಂಕರ್ಚ್ಚಿ ನ

೧೦. ಮಶ್ಯದೆರೆಯಂ ಬಿಟ್ಟರ್ ತತ್ಪಾದಪದ್ಮೋಪಜೀವಿ . . . ನಾಮಾಂಕಮಾಳಿಕಾಪ್ರಸಸ್ತಿಸ

೧೧. ಹಿತಂ ಶ್ರೀಮತ್ತಂತ್ರಪಾಳ ಮೈಲಯ್ಯ ಲಗುಳಿದರೆ. . . . ಮೇಶ್ವರದತ್ತಿಯಾಗೆಯರಸರ್ಗ್ಗೆ

೧೨. ಬಿನ್ನಪಂಗೆಯ್ದು ಪಡೆದು ಬಿಟ್ಟ ಶ್ರೀಮನ್ನಿರಿಂಜೆ. . . ಭಟ್ಟ . . . ನಜೇಯರ್ ಬರೆದರ್

## ಅದೇ ಮುಖಮಂಟಪದಲ್ಲಿನ ಮತ್ತೊಂದು ಶಾಸನ

**[A.R.No.441 of 1914; SII IX pt I.No.104]**

ಶಕ ೯೬೭ನೆಯ ವ್ಯಯ, ಕಾರ್ತಿಕ, ಪುಣ್ಣಮಿ, ಸೋಮಗ್ರಹಣವು ಕ್ರಿ.ಶ.೧೭–೧೧–೧೦೪೬ ಚಂದ್ರಗ್ರಹಣಕ್ಕೆ ಸರಿಹೊಂದುತ್ತದೆ. ಆಗ ಶಕವರ್ಷ ೯೬೮ ಗತವರ್ಷವಾಗಿರುತ್ತದೆ. ಕಲ್ಯಾಣದ ಚಾಳುಕ್ಯ ಅರಸ ತ್ರೈಲೋಕ್ಯಮಲ್ಲದೇವನು ಆಳುತ್ತಿದ್ದಾಗ ಇವನ ಸಾಮಂತನಾದ ತ್ರೈಲೋಕ್ಯಮಲ್ಲ ನನ್ನಿನೊಳಂಬಪಲ್ಲವಪೆರ್ಮಾನಡಿಯು ಬಲ್ಲಕುನ್ದೆ–೩೦೦, ಕೋಗಳಿ–೫೦೦, ಕದಂಬಳಿಗೆ–೧೦೦೦,ಕುದಿಯಹರವಿ–೭೦, ಕರಿವಿಡಿ–೩೦, ಐದು ಗ್ರಾಮಗಳು, ನೊಳಂಬವಾಡಿ–೩೨೦೦೦ವನ್ನು ಆಳುತ್ತಿದ್ದಾಗ, ಇವನ ದಂಡನಾಯಕ ತಿಕಣ್ಣನೇ ಮೊದಲಾಗಿ ಲೆಂಕಸಾಸಿರ್ವರು ಅರ್ಮ್ಮಳೆ, ನೆಲ್ಕುದುರೆ, ಸೊನ್ನ, ಪೊಳಲ್ಗುನ್ದೆ, ಸೂಗೂರು, ಮೋರೆಂಗೆರೆ ಮೊದಲಾದ ಆರು ಊರುಗಳನ್ನು ಆಳುತ್ತಿದ್ದಾಗ ಮೋರೆಂಗೆರೆಯನ್ನು ಬಲ್ಲವರಸನ ಕೈಲಿ ಪಡೆದು ನೊಳಂಬೇಶ್ವರದೇವರಿಗೆ ವಿದ್ಯಾಭ್ಯಾಸಕ್ಕಾಗಿ, ಪಾದಮೂಲ ಪರಿವಾರ ಮುಂತಾದುವಕ್ಕೆ ಸೋಮೇಶ್ವರಪಂಡಿತರ ಕಾಲನ್ನು ತೊಳೆದು, ವಿರೂಪಾಕ್ಷದೇವರ ಸಮಕ್ಷಮದಲ್ಲಿ ದಾನ ನೀಡುತ್ತಾರೆ. ದಂಡನಾಯಕ ಸೋವಿಮಯ್ಯ ಬಾವಿಯನ್ನು ಕಟ್ಟಿಸಿ ಅದಕ್ಕೆ ಸೋಮತೀರ್ಥವೆಂದು ಹೆಸರಿಟ್ಟು, ಕೆರೆ, ಬಾವಿ, ತೋಟವನ್ನು ದಾನ ನೀಡುತ್ತಾನೆ. ಈ ಶಾಸನವನ್ನು ಬರೆದವನು ನಾರಣಯ್ಯನ ಮಗ ವಿಷ್ಣಯ್ಯ. ಕೆತ್ತಿದವನು ಮುಜ್ಜೋಜನ ಮಗ ಕಲಿಯೋಜ.

೧. ಸ್ವಸ್ತಿ [॥ ॰ ] ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಪರಮಭ

೨. ಟ್ಟಾರಕ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರೈಲೋಕ್ಯಮಲ್ಲದೇವರ ವಿಜಯ

೩. ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚನ್ದ್ರಾರ್ಕ್ಕರಾರಂ ಸಲುತ್ತಿರೆ ತತ್ಪಾದ ಪದ್ಮೋಪಜೀವಿ ಸ

೪. ಮಧಿಗತಪಂಚಮಹಾಶಬ್ದ ಪಲ್ಲವಾನ್ವಯ ಶ್ರೀಪೃಥ್ವೀವಲ್ಲಭ‍ಂ ಪಲ್ಲವಕುಲತಿಳಕನಮೋಘವಾಕ್ಯಂ ಕಾಂ

೫. ಚೀಪುರವರೇಶ್ವರಂ ವೈರಿನಾರಾಯಣಂ ದ್ರೋಹಕಾಳಾನಳಂ ಮಣ್ಡಳಿಕತ್ರಿಣೇತ್ರಂ

ರಾಜಮನೋಜಂ ಹಯವತ್ಸ

೬. ರಾಜಂ ಚಿತ್ರವೆಡಂಗಂ ತ್ಯಾಗಚಿನ್ತಾಮಣಿ ರಾಜಗಜಸರ್ವ್ವಜ್ಞಂ ಶ್ರೀಮತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮ್ಮಾ

೭. ನಡಿಗಳ್ ಬಲ್ಲಕುನ್ದೆ ಮೂನೂರು ಕೋಗಳಿಯಯ್ನೂರು ಕಡಂಬಳಿಗೆ ಸಾಯಿರ ಕುದಿಯಹರವಿ ಯೆರ್ಪ್ಪತ್ತು ಕರಿ

೮. ವಿಡಿ ಮೂವತ್ತುಮಂ ಪಂಚಗ್ರಾಮಂಗಳುಮಂ । ನೊಳಂಬವಾಡಿ ಮೂವತ್ತಿಚ್ಛಾಸಿರಮುಮನಚಳ ಪ್ರವೃತ್ತಿಯಿಂ ದುಷ್ಟನಿಗ್ರಹ

೯. ವಿಸಿಷ್ಟಪ್ರತಿಪಾಳನದಿನಾಳುತ್ತಿರೆ ತತ್ಪಾದಪದ್ಮೋಪಜೀವಿಗಳ್ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರ ಶ್ರೀ

೧೦. ನೊಳಂಬಾಧಿರಾಜಶ್ರೀಪಾದಪದ್ಮಾ ಮೋದಾಶಕ್ತಮಧುಕರರ್ ವೈರಿಬಳಭೀಕರರ್ ಪಲ್ಲವಾನ್ವಯಮಹಾ ರಾಜರಾಜ್ಯ

೧೧. ಮೂಳಸ್ತಂಭಾತ್ಮಕರ್ ಚವರೀಧ್ವಜವಿರಾಜಿತರಾನೆವರೆಘೋಷಣರ್ಸತ್ಯಮಣಿಭೂಷಣರ್ ಧರ್ಮ್ಮಾನು ಕೂಳರ್ ಜಯ

೧೨. ವಧೂಲೋಲರ್ ಕಣ್ಡಳೀಮೂಳಭದ್ರೋದ್ಭವವೀರಾವತಾರರೇಕೈಕವೀರರ್ ದೀನಾನಾಥಚಿನ್ತಾಮಣಿ ಗಳಾಶ್ರಿತಜನ

೧೩. ಕಲ್ಪವೃಕ್ಷರ್ಸರಣಾಗತವಜ್ರಪಂಜರ ನಾಮಾದಿಸಮಸ್ತಪ್ರಸಸ್ತಿಸಹಿತ ಶ್ರೀಮದ್ದಣ್ಡನಾಯಕ ತಿಕಣ್ಣಪ್ರ

೧೪. ಮುಖ ಲೆಂಕಸಾಸಿರ್ವ್ವರು ಅರ್ಮ್ಮೆಳೆ ನೆಲ್ಲುದರೆ ಸೊನ್ನ ಪೊಳಲ್ಗುನ್ದೆ ಸೂಗೂರು ಮೋರೆಂಗೆರೆ ಮೊದಲಾಗಾರುಂ ಬಾಡಮುಮ

೧೫. ನಣುಗಜೀವಿತವಾಗಿ ತ್ರಿಭೋಗಾಭ್ಯನ್ತರ ಸಿದ್ಧಿಯಿನಾಳುತ್ತಂ ॥ ವಾರಿಧಿಪರಿವೃತಧಾತ್ರೀನಾರಿಯ ವದನದವೊಲೆಸೆವ

೧೬. ಕೋಗಳಿನಾಡೊಳ್ಮೋರಿಂಗೆರೆ ತಿಳಕಾಳಂಕಾರಮನನುಕರೆಪುದೆನೆ ಜನಂ ಬಣ್ಣಿಸದೆ ॥ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣ

೧೭. ಜಪಹೋಮಸಮಾಧಿಸಂಪನ್ನರಪ್ಪ ಶ್ರೀಮನ್ ಮೋರಿಂಗೆರೆಯ ಊರೊಡೆಯರ್ ಪನ್ನಿರ್ಬ್ಬರ ಕೈಯೊಳ್ ದಂಡನಾಯಕ ತಿಕಣ್ಣಿಪ್ರಮುಖಲೇಂಕ

೧೮. ಸಾಸಿರ್ವ್ವರು . . ತ್ತರಗದ್ಯಾಣಮುಂ ಸಹಿರಣ್ಯಧಾರಾಪೂರ್ವ್ವಕದಿಂದುರುದೆ ದೇವರಕೆರೆಯ ಪುಣಿಸೆಯ ಮಧ್ಯದಿ ಭೂಮಿಯಂ ಮಾ

೧೯. ರುಗೋಣ್ಡ . . . ನೂರೆರ್ಪ್ಪತ್ತು ಮತ್ತಮದರ ಹತ್ತಸಿನ ತನ್ನ ಬಳದೊಳಗೆ ಬರ್ಮ್ಮಯ್ಯಂ ವಿದ್ಯಾದಾನಕ್ಕೆ ಕೊಟ್ಟ ಮತ್ತರ್ಪ್ಪನ್ನೆರಡು ಮ

೨೦. ತ್ತಧರ್ಮಾತ ಕ್ರಯದಿಂ ಕೊಟ್ಟ ಮತ್ತರ್ಪ್ಪನ್ನೆರಡು ಅಲ್ಲಿಂ ಮೂಡಮೊಗದೆಯಾತನ ತಮ್ಮಂದಿರ್ಚವುಂಡಯ್ಯನೊಳಗಾಗಿ ಕೊಟ್ಟ ಮತ್ತ

೨೧. [ರ್ಪ್ಪತ್ತು] ಅನ್ತು ಮತ್ತನ್ನೂಂರಯ್ವತ್ತಾರುವಂ ದೇವರುಪಭೋಗಕ್ಕಂ ಪಾದಮೂಲಪರಿವಾರಕ್ಕಂ ಮಠದ ವಿದ್ಯಾದಾನಕ್ಕವೆಂದರಸ

೨೨. ರ್ಗ್ಗೆ ಬಿನ್ನಪಂಗೆಯ್ದು ಸಕವರ್ಷ ೧೬೭೭ ನೆಯ [ವ್ಯ]ಯಸಂವತ್ಸರದ ಕಾರ್ತ್ತಿಕದ ಪುಣ್ಣಮೆ ಸೋಮಗ್ರಹಣದಂದು ವಿರೂಪಾಕ್ಷದೇವರ ಸಮೀ

೨೩. ಪದಲು ಯಮನಿಯಮ ಸ್ವಾಧ್ಯಾಯ [ಧ್ಯಾನ] ಧಾರಣ ಜಪಸಮಾಧಿಸಂಪನ್ನರಪ್ಪ ಕೋಗಳಿಯ ಯ್ನೂರರ ಮಠಾಧಿಪತಿಗಳ

೨೪. ಪ್ಪ ಶ್ರೀಮಳೆಯಾಳಪಣ್ಡಿತದೇವರವರಶಿಷ್ಯರ್ ಶ್ರೀಜ್ಞಾನೇಶ್ವರಪಣ್ಡಿತರವರಶಿಷ್ಯರ್ ಸಮಸ್ತ ಶಾಸ್ತ್ರಪಾರಾವಾರಗರಪ್ಪ ಶ್ರೀಮ

೨೫. ತ್ ಸೋಮೇಶ್ವರಪಂಡಿತರವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಸರ್ವ್ವನಮಸ್ಯಂ ಸರ್ವಬಾಧಾ ಪರಿಹಾರ ತ್ರಿಭೋಗಾಭ್ಯಂತರಸಿದ್ಧಿಯಾಗಿ

೨೬. ಪದಪದ್ಮಕೆ ದತ್ತಿಯಾಗಿ ಶ್ರೀಬಲ್ಲವರಸರ ಕೈಯೊಳ್ ಪಡೆದು ಬಿಟ್ಟರ್ ॥ ಆ ಭೂಮಿಯೊಳಗೆ ದಣ್ಡನಾಯಕ ತಿಕಣ್ಣನ ದೇಗು

೨೭. ಲಕ್ಕೆ ಮತ್ತರಿರ್ಪ್ಪತ್ತು ॥ ಅನ್ತಾ ಭೂಮಿಗೆ ಸೀಮೆ ಪಡುವ . . . . ಲಂ ಮೇರೆ ಬಡಗ ಬನ್ನಿಕಲ್ಲ ಪೊಲಂ ಮೇರೆ ಮೂಡೆಸೆವಣ್ಪೊಲಂ . .

೨೮. ತೆಂಕ ಸೋವಿಮಯ್ಯನ . ಬಳ ಮೇರೆ ॥ ಸಮಧಿಗತ ಪಂ[ಚಮಹಾಶಬ್ದ ಮ] ಹಾಸಾಮನ್ತಧಿಪತಿ ಮಹಾಪ್ರಚಣ್ಡದಣ್ಡನಾಯಕಂ ಪ್ರ

೨೯. ರನ್ನಸನ್ನಾಹಂ ಶಿವಪಾದಶೇಖರಂ ನೀತಿರತ್ನಾಕರಂ ನುಡಿದಂತೆಗಣ್ಡಂ ಪತಿಹಿತಗರುಡ ನಾಮಾದಿ ಸಮಸ್ತಪ್ರಸಸ್ತಿಸಹಿತ ಶ್ರೀಮದ್ದಣ್ಡನಾ

೩೦. ಯಕ ಸೋಮಿಮಯ್ಯಂ ಮೋರಿಂಗೆರೆಯೂರೊಡೆಯರ್ಪ್ಪನ್ನ . . ಲೆಂಕಸಾಸಿರ್ಬ್ಬರ ಸನ್ನಿಧಾನದಲಿ ಊ . . . ಮಾಕಿಮಯ್ಯಂ

೩೧. [ಗಂ]ಮಲ್ಲಿಪಯ್ಯಂಗಂ ಪೊನ್ನಕೊಟ್ಟು ಕೆಳಗೆಯ ಕೆರೆಯುಂ ಕೆರೆಯ ಕೆಳಗಣ ಮೂರು ಮತ್ತರ್ಕ್ಕೆ ಯ್ಯುಮಂ ಸಹಿರಣ್ಯಂಗೊಟ್ಟು

೩೨. ರಾಪೂರ್ವ್ವಕಂ ಮಾರುಗೊಣ್ಡ ಕೆರೆಯೊಳಗೆ ಬಾವಿಯನಗಳಿಸಿ ಸೋಮತೀರ್ಥಮೆನ್ದು ಪೆಸೆರನಿಟ್ಟು ಪೂದೋಂಟಂ ನನ್ದನವನ

೩೩. ಮುಮನಿಟ್ಟು ಕೆರೆ ಬಾವಿ ತೋಂ[ಟ] ಕೆರೆ . . . ಮೆ ಸೋಮೇಶ್ವರಪಣ್ಡಿತರ ಕಾಲಂ ಕರ್ಚ್ಚಿ ನೊಳಂಬೇಶ್ವರದೇವರಿಗೆ ಕೊಟ್ಟರ್ ॥

೩೪. ಊರೊಡೆಯ ನಾರಣಮಯ್ಯನ ಮಗ ನಾಗವರ್ಮಯ್ಯನುಮಾತನ ತಮ್ಮ ವಿಷ್ಣಯ್ಯನು ತಮ್ಮ ಬೇವಿನ ಕೆರೆಯ

೩೫. ಕೆ . . ಸಹಿರಣ್ಯಂಗೊಣ್ಡು ನೊಳಂಬೇಶ್ವರದೇವರಿಗೆ ಕೊಟ್ಟ ಮತ್ತ ೩ । ಇನ್ತೀ . . . . . ನಿತುಂ ಕೋಗಳಿಯ ಗಡಿಂಬದಲು ಮತ್ತ

೩೬. ಮೂರು ಗೇಣು ಕೋಲ್ಗೊಳಳೆದು ಕೊಟ್ಟರ್ ॥ ಇನ್ತೀ ಧರ್ಮ್ಮಮಂ ರಕ್ಷಿಸಿದಾತಂಗೆ ವಾರಣಾಸಿ ಯೊಳ್ ಸಾಸಿರ ಕವಿಲೆಯಂ ಬ್ರಾಹ

೩೭. ಣರಿಗಂ ತಪೋಧನರಿಗಂ ಕೊಟ್ಟ ಪುಣ್ಯಮಕ್ಕು ॥ ಇನ್ತೀ ಧರ್ಮ್ಮಮನಳಿದಾತಂಗೆ [ನಳಿಯ]ಲೊಡಂ ಬಟ್ಟಂಗಂ ವಾರಣಾಸಿಯೊಳಂ ಕುರು

೩೮. ಕ್ಷೇತ್ರದೊಳಂ ಪ್ರಯಾಗೆಯೊಳಂ ಸಾಸಿರ ಕವಿಲೆಯುಮಂ ಬ್ರಾಹ್ಮಣರುಮಂ ತಪೋಧನರುಮನಳಿದ ಪಾಪಮಕ್ಕು

೩೯. ಬಹುಭಿರ್ವಸುಧಾ ದತ್ತಾ ರಾಜಭಿಸ್ಸಗರಾದಿಭಿಃ । ಯಸ್ಯ ಯಸ್ಯ ಯದಾ ಭೂಮಿ[ಃ *] ತಸ್ಯ ತಸ್ಯ ತದಾ ಫಲಂ ॥

೪೦. ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುನ್ಧರಾಂ । ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥ ಸಾಮಾನ್ಯೋ

೪೧. ಯಂ ಧರ್ಮ್ಮಸೇತುರ್ನ್ನೃಪಾಣಾಂ ಕಾಲೇ ಕಾಲೇ ಪಾಳನೀಯೋ ಭವದ್ಭಿಃ । ಸರ್ಬ್ಬಾನೇತಾನ್ಭಾಗಿನಃ ಪಾರ್ತ್ಥಿವೇನ್ದ್ರಾನ್ ಭೂಯೋ ಭೂಯೋ

೪೨. ಯಾಚತೇ ರಾಮಭದ್ರಃ ।[। *] ಭೂಮಿರತ್ನಾಶ್ವನಾಗಾನಾಂ ಗೋಹಿರಣ್ಯಾದಿವಾಸಸಾಂ । ಭವೇತ್ಪೂರ್ವ್ವಪ್ರದತ್ತಾನಾಂ ದಾನಾಚ್ಛ

೪೩. ತಗುಣಂ ಫಲಂ ॥ ಯತ್ಪ್ರದಾನಾದ್ವಸೇತ್ಸ್ವರ್ಗೇ ಯಾವತ್ಕಾಲಸ್ಯ ಸಂಖ್ಯೆಯಾ । ತಸ್ಮಾಚ್ಛತಗುಣಂ ಕಾಳಂ ತದ್ಧ(ರ್ತ)ರ್ತ್ತಾ ನರಕೇ ವ

೪೪. ಸೇತ್ ॥ ಊರೊಡೆಯ ನಾರಣಮಯ್ಯನ ಮಗಂವಿಷ್ಣಯ್ಯ ಬರೆದಂ ರೂವಾರಿ ಮೂಚ್ಓಜನ ಮಗಂ ಕಲಿಯೋಜಂ ಬೆಸಗೆಯ್ದ[॥ *]